# ಅಂತರಂಗ

ಸಂಪುಟ ೧. ೨೫ ಸಪ್ಟಂಬರ್ '೩೮ ಆದಿತ್ಯವಾರ. ಸಂಚಿಕೆ ೧೧.

## ಅಂತರಂಗ

ವಿಶೇಷ ತರದ ಕನ್ನಡ ವಾರಪತ್ರಿಕೆ.

**ಮಣಿಪಾಲ, ಉಡುಪಿ.**

---

**ಎಸ್. ಯು. ಪಣಿಯಾಡಿ.**

(*Editor-in-chief*)

**ಕೆ. ಹೈದರ್.**

(*Managing Editor*)

●

Associate Editors

ಎಸ್. ಎಸ್. ಕಾರಂತ.

ಪಿ. ವಿ. ಆಚಾರ್ಯ.

ಪಿ. ಎಲ್. ಅಡಿಗ.

ಎಂ. ವಿ. ಹೆಗ್ಡೆ.



●

## ಚಂದಾ ವಿವರ:

**ವಾರ್ಷಿಕ ಚಂದಾ ಮೂರು ರೂಪಾಯಿ.**

ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.

. . . .

**ಬಿಡಿ ಸಂಚಿಕೆ ಒಂದಾಣೆ.**

ನಿಮ್ಮ ಊರಿನ ಏಜಂಟರಿಂದ ಪಡಕೊಳ್ಳಿರಿ.

. . . . .

## ಜಾಹಿರಾತಿನ ದರ:

| | | | | |
|---|---|---|---|---|
| ಇಡೀ | ಪುಟ | ರೂಪಾಯಿ | ೧೦—೦—೦ | ಒಂದು ಸರ್ತಿಗೆ |
| ಅರ್ಧ | ,, | ,, | ೫—೦—೦ | ,, |
| ಕಾಲು | ,, | ,, | ೩—೦—೦ | ,, |
| ಅರೆಕಾಲು | ,, | ,, | ೨—೦—೦ | ,, |
| ಕಲಮು ಇಂಚಿಗೆ | | , | ೧—೦—೦ | ,, |

## ಜಾಹಿರಾತು ಕೊಡುವವರಿಗೆ ಸಲಹೆ:

೧. ಜಾಹಿರಾತಿನ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.

೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.

೩. ಬದಲಾವಣೆಯಲ್ಲಿ ಒಂದುವಾರ ಮುಂಚಿತವಾಗಿ ತಿಳಿಸಬೇಕು.

೪. ಬ್ಲೋಕುಗಳು ವಾಪಾಸು ಬೇಕಾದಲ್ಲಿ ಅವರವರ ಖರ್ಚಿನಿಂದಲೇ ವಾಪಾಸು ಪಡೆಯಬೇಕು.

೫. ಜಾಹಿರಾತಿನ ಬಾಬ್ತು ಹಣವನ್ನು ಮುಂಗಡವಾಗಿಯೆ ಕೊಡಬೇಕು.

**ಮಾಲಕರು ಮುದ್ರಕರು ವ ಪ್ರಕಾಶಕರು:**

ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.

**ಮುದ್ರಣ ವ ಪ್ರಕಟನಾ ಸ್ಥಳ: ಮಣಿಪಾಲ ಪವರ್ ಪ್ರೆಸ್, ಮಣಿಪಾಲ, ಉಡುಪಿ.**

# ಸಿ ಹಿ - ಕ ಹಿ

ಕವಿ ರವೀಂದ್ರನಾಥ ಟಾಗೋರರು ಜಪಾನ್ ಕವಿ ಯೋನ ನೊಗೂಚಿಯವರಿಗೆ ಉತ್ತರವೀಯುತ್ತಾ ಜಪಾನಿಯರಿಗ ತುಂಬಾ ಬುದ್ಧಿವಾದ ಹೇಳಿದರು.

ಕುಡಿದು ಮತ್ತನಾಗಿರುವವನಿಗೆ ಬುದ್ಧಿ ಹೇಳಿದರೆ ಹೇಗೋ ಹಾಗೆಯೇ ಅಧಿಕಾರದಿಂದ ಮತ್ತನಾಗಿರುವ ಜಪಾನಿಗೆ ಹಿತಸೂಚನೆಗಳನ್ನಿತ್ತರೆ ಅದು ಕವಿ ಟಾಗೋರರ ತತ್ವಗಳನ್ನು ಮನ್ನಿಸುವ ಬದಲು ಅವಹೇಳನಕ್ಕೆ ಗುರಿಮಾಡಬಹುದು. ರವಿಂದ್ರನಾಥರು ತನ್ನ ಸಮಯವನ್ನು ಹಾಗೆ ದುರುಪಯೋಗಿಸುವ ಬದಲು ಭಾರತೀಯರನ್ನು ಹುರಿದುಂಬಿಸುವ ಒಂದು ಕವನವನ್ನು ಬರೆಯಬಹುದಿತ್ತು!

ಬರ್ಮಾ ಸರಕಾರವು "ಭಾರತೀಯರ"ನ್ನು ರಕ್ಷಿಸಲಿಲ್ಲವೆಂದು ಮಿ| ಮಹಮ್ಮದಾಲಿ ಜಿನ್ನರು ಹೇಳಿದರು.

ಮಿ| ಜಿನ್ನರ ರಾಷ್ಟ್ರೀಯತೆಯು ವಿಶಾಲವಾಗುತ್ತಾ ಬರುತ್ತಿದೆ. ಯಾವಾಗಲೂ "ಮುಸ್ಲಿಮ್" ಎಂದು ಹೇಳುವವರು ಈ ಬಾರಿ "ಭಾರತೀಯ"ರೆಂದು ಹೇಳಿಬಿಟ್ಟಿದ್ದಾರೆ. ಜನತಾ ಸಂಪರ್ಕ ಚಳವಳದವರಿಗೆ ಇದೊಂದು ಕೀರ್ತಿಯಲ್ಲವೆ?

ಮಹಾತ್ಮಾಜಿಯವರು ಕ್ರಿಮಿನಲ್ ಲಾ ಎಮೆಂಡ್‌ಮೆಂಟ್ ಆಕ್ಟನ್ನು ಸಮರ್ಥಿಸಿ ದೊಡ್ಡ ಹೇಳಿಕೆಯನ್ನು ಹೊರಡಿಸಿದ್ದಾರೆ. ಈ ಕಾಯಿದೆಯನ್ನು ದೂರದ ಕಾಂಗ್ರೆಸ್ ಭಕ್ತನಿಲ್ಲವಿದ್ದರೂ ಮಹಾತ್ಮಾಜಿಯರು ಈಗ ಸಮರ್ಥಿಸಿರುವುದನ್ನು ನೋಡುವಾಗ ಕಾಲಚಕ್ರವು ಸಿಕ್ಕಾಬಟ್ಟೆ ತಿರುಗುತ್ತಿದೆ ಯೆಂಬುದಕ್ಕೆ ಬೇರೆ ನಿದರ್ಶನ ಬೇಕೆ?

ಕೇಂದ್ರ ವಿಧಾಯಕ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಧುರೀಣರಾದ ಶ್ರೀ. ಭೂಲಾಭ್ಯಾ ದೇಸಾಯಿಯವರು ಸೈನ್ಯದ ಭಾರತೀಕರಣಕ್ಕಾಗಿ ಬ್ರಿಟಿಷ್ ಸರಕಾರದೊಡನೆ ಕಾಡಿಬೇಡುತ್ತಿದ್ದಾರೆ.

ಬ್ರಿಟಿಷ್ ಸರಕಾರದಲ್ಲಿ ಇನ್ನೂ ವಿಶ್ವಾಸವುಳಿದಿರುವುದನ್ನು ಕಾಣುವಾಗ ಪ್ರಾಂತಿಕ ಸ್ವಾಯತ್ತೆ ಯಾನೆ "ಸತೀ ಬ್ರಿಟಿಷ್ ರಾಜ್ಯಭಾರಿಣಿ"ಯನ್ನು ಕಾಂಗ್ರೆಸ್ ಅಪ್ಪಿಹಿಡಿದಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಡಾ| ಖರೆಯವರು ಮಧ್ಯ ಪ್ರಾಂತ್ಯದ ವಿಧಾಯಕ ಸಭೆಯಲ್ಲಿ ವಿರೋಧಪಕ್ಷದವರಾದ ಶ್ರೀ. ಜೆ. ಬಿ. ಖಾಪರ್ಡೆಯವರ ನಿಲುವಳಿ ಸೂಚನೆಯನ್ನು ಸಮರ್ಥಿಸಿರುವುದರಿಂದ ಹಾಗೆಮಾಡಿರುವುದಕ್ಕಾಗಿ ಕಾಂಗ್ರೆಸ್ ಪಕ್ಷದವರು ಅವರಿಂದ ಉದಾಹರಣೆಯನ್ನು ಕೇಳಿರುವರಂತೆ.

ಇಡೀ ಮುಳುಗಿದವನಿಗೆ ಛಳಿಯ ಭಯವೇನು? ಎಂಬುದೇ ಡಾ| ಖರೆಯವರ ಉತ್ತರವಾಗಿರಬಹುದು.

ಸ್ಥಳೀಕ ಸಂಸ್ಥೆಗಳ ಕಾರ್ಯವನ್ನೂ ಸರಕಾರವು ಮಾಡಿದರಾಗದೇ-ಎಂದು ಮಾನ್ಯಮಂತ್ರಿ ಬಿ. ಗೋಪಾಲ ರೆಡ್ಡಿಯವರು ಸೇಲಮಿನಲ್ಲಿ ಕೇಳಿದರು.

ಈ ಪ್ರಶ್ನೆಯು ಜಿಲ್ಲಾ ಬೋರ್ಡು ಮತ್ತು ಮುನ್ಸಿಪಾಲಿಟಿಗಳ ಸದಸ್ಯರಿಗೆ ತುಂಬಾ ವೇದನೆಯನ್ನುಂಟುಮಾಡಬಹುದೆಂದು ಅವರಿಗನ್ನಿಸದಿರುವುದು ಬಹಳ ಬೇಸರದ ಸಂಗತಿಯುಲ್ಲವೆ?

ಸ್ತ್ರೀಯರಿಗೆ ಸಮಾನತೆಯನ್ನು ಕೊಟ್ಟವರಲ್ಲಿ ಯೇಸುಕ್ರಿಸ್ತರು ಅಗ್ರಗಣ್ಯರೆಂದು ದೀನಬಂಧು ಸಿ. ಎಫ್ ಏಂಡ್ರೂಸರು ಬೆಂಗಳೂರಿನಲ್ಲಿ ಹೇಳಿದರು.

ಆದರೆ ಬೈಬಲಿನಲ್ಲಿ ಬೇರೆಯೇ ಕತೆಯು ಹೇಳಲ್ಪಟ್ಟಿದೆ. ಪ್ರಾಯಶಃ ಆದರ ಅರ್ಥದಲ್ಲಿ ಕೆಲವು ಮಾರ್ಪಾಟಗಳು ಈಗಾಗಲೆ ತಲೆದೋರಿರಬಹುದು.

ಬ್ರಿಟಿಷ್ ಪತ್ರಿಕೆಗಳಲ್ಲಿ ತಿರುವಾಂಕೂರು ಮದ್ರಾಸ್ ಸಂಸ್ಥಾನದಲ್ಲಿದೆಯೆಂದು ಪ್ರಕಟವಾಗಿದೆಯೆಂದು. ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ಹೇಳಿದ್ದಾರೆ.

ಬೇಷ್! ಬ್ರಿಟಿಷ್ ಪತ್ರಿಕೆಗಳ ಜ್ಞಾನದ ಭಾಂಢಾಗಾರವನ್ನು ಕಂಡು ಎಂಥವರೂ ಮತ್ಸರಪಡಬೇಕು. "ಮಹಾತ್ಮಾ ಗಾಂಧಿಜಿಯವರು ೮೦ ಅಡಿ ಆಳವಿರುವ ಹೊಂಡವೊಂದರಲ್ಲಿ ತಪಸ್ಸು ಮಾಡುತ್ತಿದ್ದಾರೆ"ಂದು ಇತ್ತೀಚೆಗೆ ಬ್ರಿಟಿಷ್ ಪತ್ರಿಕೆಯೊಂದು ಪ್ರಕಟಿಸಿರುವುದರಲ್ಲಿ ಒಂದಿಷ್ಟು ಆಶ್ಚರ್ಯವೂ ಇಲ್ಲ.

# ಉರುಡಾಡುವ ಬುದ್ಧಿ

**ನಗೆ ಬರಹ** ▫ ▫ ▫ ▫ ▫ ▫ ಬರೆದವರು: **"ವಿಟ್ಟು"**

"ನಾವು ಪಾರ್ಲಿಮೆಂಟರಿ ಮನೋವೃತ್ತಿಯನ್ನು ಬಿಟ್ಟು ಹೋರಾಟದ ಮನೋವೃತ್ತಿಯವರಾಗಬೇಕು" ಎಂದು ನಮ್ಮ ರಾಷ್ಟ್ರಪತಿ ಸುಭಾಸ ಚಂದ್ರಬೋಸರು ಇತ್ತೀಚಿಗಿನ ಒಂದು ಭಾಷಣದಲ್ಲಿ ಹೇಳಿದರು. ಅಂದರೆ, 'ಕುರ್ಚಿಯಲ್ಲಿ ಕುಳಿತುಕೊಳ್ಳುವ ಬುದ್ಧಿಯನ್ನು ಬಿಟ್ಟುಕೊಟ್ಟು ಉರುಡಾಡುವ ಬುದ್ಧಿಯನ್ನು ತೋರಿಸಬೇಕು' ಎಂದರ್ಥ. ಅವರು ಕಾಂಗ್ರೆಸ್ ಅಧ್ಯಕ್ಷರು; ನಾನೆಂದರೆ ಅವರು ಅಧ್ಯಕ್ಷರಾದ ಸುಮುಹೂರ್ತದಲ್ಲೇ ಕಾಂಗ್ರೆಸಿಗೆ ಸೇರಿಸಿಕ್ಕಾಬಟ್ಟೆ ಒದ್ದಾಡಿದ ಸುಪ್ರಚಂಡ ದೇಶಭಕ್ತ. ಹೀಗಿರುವ ನನಗೆ ಅವರ ಬೋಧನೆಯನ್ನು ಲಕ್ಷ್ಯವಿಟ್ಟು ಪರಿಶೀಲಿಸುವ ಅಧಿಕಾರವುಂಟೇ ಉಂಟು. ಈ ಅಧಿಕಾರದ ಒಲದಿಂದ ಅದನ್ನು ಪರಿಶೀಲಿಸುತ್ತೇನೆ.

ಹೌದು. ರಾಷ್ಟ್ರಾಧ್ಯಕ್ಷರ ಅಪ್ಪಣೆಯನ್ನು ನಾವು ಪಾಲಿಸಬೇಕು. ಅಂದರೆ ಈಗ ನಾವದನ್ನು ಪಾಲಿಸುತ್ತಿಲ್ಲವೇ? ಪಾಲಿಸಿಕೊಂಡೇ ಬಂದಿದ್ದೇವಲ್ಲ. ನಮ್ಮಲ್ಲಿ ಉರುಡಾಡುವ ಬುದ್ಧಿಯು ಮೊದಲಿನಿಂದಲೇ ಉಂಟಲ್ಲ! ಆದರೆ ಒಂದು ಮಾತು ನಿಜ. ಒಂದೊಂದು ಸೀಟು ಸಂಪಾದಿಸಿ ಕೂತುಕೊಂಡವರಲ್ಲಿ ಉರುಡಾಡುವ ಬುದ್ಧಿ ಕಡಿಮೆ. ಕುರ್ಚಿ ಬಿಡದೆ ಉರುಡಾಡಲಿಕ್ಕಾಗುವದಿಲ್ಲ; ಕುರ್ಚಿಯಿಂದೆಬ್ಬಿಸಿದೊಡನೆ ಉರುಡಾಡುವ ಬುದ್ಧಿ ಬರುತ್ತದೆ. ಇದು ಸುಭಾಸರ ಅನುಭವ ಪೂರ್ಣ ಮಾತು. ಫೆಡರೇಶನ್ ಬರುವಾಗ 'ನಾನು ಅಧ್ಯಕ್ಷ ಸ್ಥಾನದ ಸೀಟು ಬಿಡುತ್ತೇನೆ; ಉರುಡಾಡುತ್ತೇನೆ' ಎಂದು ಅವರೊಮ್ಮೆ ಹೇಳಿದ್ದರಲ್ಲ! ಓಹೋ! ಹಾಗೆ,– ಕುರ್ಚಿ ಬಿಡದೆ ಉರುಡಾಡಲಿಕ್ಕಾಗುವದಿಲ್ಲ. ಕುರ್ಚಿಯಲ್ಲಿ ನಾನಾ ಆಟ ಮಾಡಿ ತೋರಿಸುವ ಸರ್ಕಸಿನವರಿರಬಹುದು. ಕುರ್ಚಿಯಲ್ಲಿ ಕುಳಿತು ಉರುಡಾಡಿದ-ಕುಸ್ತಿ ಹಿಡಿದ- ಭಟರ್‍ಯಾರೂ ಇಲ್ಲ. ಇದೊಂದು ಮಾತು ಸತ್ಯವೆಂದಾಯಿತಲ್ಲ. ಇನ್ನು ಕುರ್ಚಿಯಿಂದೆಬ್ಬಿಸಿದೊಡನೆಯೇ ಉರುಡಾಡುವ ಬುದ್ಧಿ ಬರುತ್ತದೆ' ಎಂಬ ಮಾತೂ ಅಷ್ಟೇ ಸತ್ಯ. ದೃಷ್ಟಾಂತ ಬೇಕೆ? ಮೊನ್ನೆ ಸತ್ಯ ಮೂರ್ತಿಗಳು ಸುಭಾಸ ಚಂದ್ರರೊಡನೆ ಉರುಡಾಟಕ್ಕಿಳಿದರಲ್ಲ- ಆ ಬುದ್ಧಿ ಬಂದದ್ದು ಕುರ್ಚಿ ಬಿಡಬೇಕಾಗುತ್ತದಲ್ಲಾ ಎಂಬ ಗಾಬರಿಯಿಂದಲೆ. ಸೀಟುಗಳನ್ನು ಬಿಟ್ಟು ಫೆಡರೇಶನಿನ ಹೋರಾಟಕ್ಕಿಳಿಯುವದೆಂದರೆ ಅರ್ಥವುಂಟೇನಯ್ಯಾ? ಅದಕ್ಕೇ ಹೇಳಿದೆ- 'ಕುರ್ಚಿ ಬಿಡಿಸಿದೊಡನೆಯೇ (ಸತ್ಯಮೂರ್ತಿಯಂತೆ) ಉರುಡಾಡುವ ಬುದ್ಧಿ ಬರುತ್ತದೆ' ಎಂದು. ಒಂದು ನಿದರ್ಶನ ನಿಮ್ಮ ಸತ್ಯಮೂರ್ತಿಯವರದ್ದಾಯಿತಲ್ಲ; ಇನ್ನೊಂದು ಬೇಕಾದರೆ ನಮ್ಮ ಪುತ್ತು ಮೂರ್ತಿಗಳದ್ದು ಕೊಡೋಣ.



"ನಡಿ ಇಲ್ಲಿಂದ. ಹಿಡಿಸೂಡಿ ಹಿಡಿಯುವದನ್ನು ಬಿಟ್ಟು ಬೆಳಿಗ್ಗೆ ಬೊಬ್ಬೆಹಾಕುತ್ತಾ ಬರುತ್ತಾಳೆ".

ಪುತ್ತು ಮೂರ್ತಿ ನಿನ್ನೆ, ಯಾವ ತಂಟೆಯೂ ಬೇಡವೆಂದು ಬಗೆದು ಕೋಣೆಯೊಳಗೆ ಹೋಗಿ ಕುರ್ಚಿ ಹಿಡಿದು ಗಮ್ಮತು ಮಾಡಿ ಕುಳಿ

ತಿದ್ದ. ದೀಪಾವಳಿ ಹಬ್ಬ ಸಮೀಪಿಸುತ್ತಿದೆ. ಸಾಲಕೊಟ್ಟ ಸಾಹುಕಾರರೆಲ್ಲಾ ವಾಮನಾವತಾರ ತಾಳಿಕೊಂಡು ಮನೆ ಬಾಗಿಲಿಗೆ ಬಂದು ಕೇಳಹತ್ತಿದರೆ, ತಾನು ಕೊಡುತ್ತಾ ಬಂದರೆ, ಬಲಿ ಚಕ್ರವರ್ತಿಯಂತೆ ದೀಪಾವಳಿಯ ದಿನವೇ ಊರು ಬಿಡಬೇಕಾಗುವದೆಂದು ಅವನಿಗೆ ಗೊತ್ತು. ಊರು ಬಿಡುವ ಗಂಡಾಂತರವನ್ನು ಚಾವಡಿ ಬಿಟ್ಟು ತೀರಿಸಿಕೊಳ್ಳಬಹುದೆಂಬ ಆಶೆಯಿಂದ ಅವ ಇಡೀ ದಿನ ಕೋಣೆ ಬಿಡುತ್ತಿದ್ದಿಲ್ಲ. ಕೋಣೆಯಲ್ಲಿಯ ಕುರ್ಚಿಯಾಯಿತು- ಅವನಾಯಿತು! ನಿನ್ನೆ ಮುಂಜಾನೆ- ಹೊತ್ತು ಮೂಡುತ್ತದೆ ಮಾತ್ರ- ಪದ್ಮ ಕೋಣೆಯೊಳಗೋಡಿ ಬಂದಳು. "ಕೇಶವ ಕಮ್ತಿಯರು ಬಂದಿದ್ದಾರೆ, ಕುರ್ಚಿ ಈಚೆ ಕೊಡಿ, ಅವರು ಅಂಗಳದಲ್ಲಿ ನಿಂತುಕೊಂಡೇ ಇದ್ದಾರೆ" ಎಂದು ಶೂರ್ಪನಖಿಯಂತೆ ಎಳೆಯಲಿಕ್ಕೇ ಬಂದಳು. "ಇಲ್ಲಿಂದ ನಡಿಯುತ್ತಿಯೋ ಇಲ್ಲವೋ? ಹಿಡಿಸೂಡಿ ಹಿಡಿಯುವದನ್ನು ಬಿಟ್ಟು (ಬೇರೆ ಅರ್ಥಮಾಡ ಬೇಡಿ- ಮುಂಜಾನೆ ಗುಡಿಸುವದಷ್ಟೇ ಹೆಂಗಸರ ಕೆಲಸವೆಂದರ್ಥ ಈ ಮಾತಿಗೆ) ಬೆಳಗ್ಗೆ ಬಂದು ಬೊಬ್ಬೆ ಹಾಕುತ್ತಾಳೆ, ಗಯ್ಯಾಳಿ!" ಎಂದು ದೊಣ್ಣೆ ಹಿಡಿದ ಪುತ್ತುಮೂರ್ತಿ. ಕುರ್ಚಿ ಬಿಟ್ಟು ಹೋವರೆ ಎಂಥಾ ಸಂಕಷ್ಟವನ್ನೆದುರಿಸ ಬೇಕಾಗುವದೆಂದು ನಿಮ್ಮ ಸತ್ಯಮೂರ್ತಿಯವರಂತೆ ನಮ್ಮ ಪುತ್ತುಮೂರ್ತಿಗೂ ಗೊತ್ತು. ಕುರ್ಚಿಬಿಡಿಸಿದೊಡನೆ ಹೋರಾಡುವ ಬುದ್ಧಿ ಬರುತ್ತದೆಂಬುದಕ್ಕೆ, ನೋಡಿ ನಮ್ಮ ಮೂರ್ತಿಯನ್ನು-ಹಿಡಿದನಲ್ಲಾ ದೊಣ್ಣೆ!

ಆದರೆ ಇಷ್ಟು ಮಾತ್ರ ಸಾಲದು. ಕುರ್ಚಿಯಲ್ಲಿ ಕುಳಿತುಕೊಳ್ಳುವ ದೊಡ್ಡ ಮನುಷ್ಯರಿಗೆ ಮಾತ್ರ ಉರುಡಾಡುವ ಬುದ್ಧಿ ಹುಟ್ಟಿದರೆ ದೇಶದ ಅಭ್ಯುದಯವಾಗುವಂತಿಲ್ಲ. ಆದ್ದರಿಂದಲೇ ಕಾಂಗ್ರೆಸ್ ಸಾರ್ವಜನಿಕ ಸಂಬಂಧ ಚಳವಳ ಹೂಡಿದೆ. ಸರ್ವಸಾಮಾನ್ಯ ಜನರಲ್ಲಿಯೂ ಈ



ಹೀಗೆ 'ಕೈ ಮೈ'ಯಾಗಬೇಕೆಂದೇ ತಿಮ್ಮಪ್ಪ–ಸೂರಪ್ಪರು 'ಕೈ ಮೈ'ಯಾಗಲು ತಡಮಾಡಿಕೊಂಡದ್ದು.

ಉರುಡಾಡುವ ಬುದ್ಧಿ ಬೇಕು. ಹೌದು, ಅದು ಕೂಡಾ ನಮ್ಮ ಹಿಂದುಸ್ಥಾನದಲ್ಲಿರುವಷ್ಟು ಮತ್ತೆಲ್ಲಿಯೂ ಇಲ್ಲ. ನಾವು ಉರುಡಾಡಲು ಜಾಗೃತರಾಗಿರುವಷ್ಟು ಮತ್ತಾವ ದೇಶದವರೂ ಆಗಿಲ್ಲ. ನೋಡಿ, ನಮ್ಮ ಸೂರಪ್ಪ ಮತ್ತು ಸೇಸಿ ಮೊನ್ನೆ ಶುಕ್ರವಾರ ಸಂತೆಗೆ ಹೋಗುವವರು. ದಾರಿಯಲ್ಲಿಯೇ ತಿಮ್ಮಪ್ಪನ ಮನೆ. ದಂಪತಿಗಳು ಸಂತೇಯಾತ್ರೆ ಹೊರಟಿರುವಾಗ ಏನಾದರೂ ಆಪಶಕುನವನ್ನುಂಟು ಮಾಡುವದು ಯಾರಿಗೂ ನೀತಿಯಲ್ಲ. ಆದರೆ ತಿಮ್ಮಪ್ಪನ ಮನೆಯ ನಾಯಿ ಭೌ ಭೌ ಭೌ ಎಂದು ಬಗುಳಿತು 'ಯಾಕೆ ಬಗುಳುತ್ತೀಯಾ ನಾಯಿ!' ಎಂದು ತಿಮ್ಮಪ್ಪ ಕೇಳಲಿಲ್ಲ. ಸೂರಪ್ಪನಿಗೆ ಬಂತಯ್ಯಾ ಸಿಟ್ಟು. "ಏನು ಕಣ್ಣು ಹೊಟ್ಟ್ಯಾಗಿದೆಯೋ ನಿನಗೆ? ನಾಯಿ ಮೈ ಮೇಲೆ ಬೀಳಲಿಕ್ಕೆ ಬರುತ್ತದೆ. ಕಣ್ಣು ಕಣ್ಣು ನೋಡುತ್ತಾ (ಕಣ್ಣು-ಕಣ್ಣು ಎಂದರೆ ತಿಮ್ಮಪ್ಪನ ಕಣ್ಣು ಮತ್ತು ಸೇಸಿಯ ಕಣ್ಣು-ಆಗಿತ್ತೋ ಏನೋ! ಸೂರಪ್ಪನಿಗೆ ಅತ್ಯುಗ್ರಕೋಪ ಬಾರದೆ ಹೋದೀತೆ?) ಕುಳಿತಿದ್ದಾನೆ" ಎಂದು ಅಬ್ಬರಿಸಿದ. ತಿಮ್ಮಪ್ಪ ಎದ್ದು ನಿಂತು "ಏನು ಬಗುಳುತ್ತಿಯೋ" (ನಾಯಿಗಲ್ಲ, ಸೂರಪ್ಪನಿಗೆ!) ಎಂದ. ಒಡನೆಯೇ ಸಿಕ್ಕಾಬಟ್ಟೆ ಬೈದಾಡಿ ಕೊಳ್ಳಲು ಪ್ರಾರಂಭ. ಬೈಗಳೆಲ್ಲಾ ಖರ್ಚಾಗುವ ಹೊತ್ತಿಗೆ ಮುಂದೆ ಮುಂದೆ ಬಂದು ಕೈ ಮೈಯಾಗುವದೊಂದೇ ಬಾಕಿ. ಅಷ್ಟು ಬಾಯಿ-

ಟ್ಟದ್ದು ಕೂಡ ಯಾರಾದರೂಬಂದು ಹಿಡಿದುಕೊಳ್ಳಬೇಕೆಂಬು ದ ಕ್ಕಾ ಗಿ ಮಾತ್ರ. ತಿಮ್ಮಪ್ಪನ ತಮ್ಮ ಓಡಿ ಬಂದು ತಿಮ್ಮಪ್ಪನನ್ನು ಹಿಡಿದು ಕೊಂಡ; ನೇಸಿ ಸೂರಪ್ಪನನ್ನು ಹಿಡಕೊಂಡಳು. ಜಗಳ ಅಷ್ಟರಲ್ಲೆ ಮುಗಿಯಿತೆನ್ನಿ. ಆದರೆ ರಾಷ್ಟ್ರಪತಿ ಯು ಉಪದೇಶಿಸುವ ಉರುಡಾಡುವ ಬುದ್ಧಿಯೊಂದಲ್ಲವಾದರೆ, ಅವರೇಕೆ ಹಾಗೆ ಮಾಡಬೇಕಿತ್ತು ಹೇಳಿ. ಉಂಟು, ನಮ್ಮಲ್ಲಿ ಸಾಮಾನ್ಯ ಜನ ರಲ್ಲಿಯೂ ಉರುಡಾಡುವ ಬುದ್ಧಿ ಉಂಟೇ ಉಂಟು.

ಆದರೆ ನನ್ನಒಂದು ತಪ್ಪನ್ನುನಾನು ಒಪ್ಪಿಕೊಳ್ಳಬೇಕಾಗುತ್ತದೆ. ಮೇಲಿನ ಜಗಳ ನೋಡುತ್ತಾ ನಿಂತಿದ್ದ ನಾನು ತಿಮ್ಮಪ್ಪನಿಗೂ ಸೂರಪ್ಪ ನಿಗೂ "ಈ ಬುದ್ಧಿ ಒಳ್ಳೆಯದಲ್ಲ ನೋಡು, ಯಾಕೆ ಉರುಡಾಡಿ ಕೊಳ್ಳಬೇಕು.?" ಎಂದು ಹೇಳಿದ್ದೆ. ನಮ್ಮ ಅಧ್ಯಕ್ಷರು ಉರುಡಾಡುವ ಬುದ್ಧಿಯನ್ನು ಅಪೇಕ್ಷಿಸುತ್ತಾರೆ ಎಂದು ಗೊತ್ತಾದುದು ಆ ಮೇಲೆ. ಇಲ್ಲವಾದರೆ ಸೂರಪ್ಪನಿಗಾಗಲೀ ತಿಮ್ಮಪ್ಪನಿಗಾಗಲೀ 'ಒಂದು ಕೈ ನೋಡಿ ಬಿಡು' ಎಂದು ಕಣ್ಣೊತ್ತು ತಿದ್ದೆ. ಹೋಯ್ತು, ಇನ್ನಷ್ಟು ದೊಡ್ಡ ದೇಶಭಕ್ತನಾಗುವ ಚಾನ್ಸು ಒಮ್ಮೆ ತಪ್ಪಿ ಹೋಯಿತು. ಆದುದಾಯ್ತಲ್ಲಾ, ಮುಂದಕ್ಕೆ ನೋಡೋಣ!



## ನುಸಿಗೆ—

ಬಡ ಮುನಿಸಿಪಾಲಿಟಿಗೆ ಒಡ ಹುಟ್ಟಿದವ ನೀನು!
ನಿನ್ನ ಗಾನದ ಸಿರಿಗೆ ಕರುಬಿ, ನಾಚುಗೆಗೊಂಡು
ಕಾಡಾಡಿಯಾಗಿ ತಲೆ ಮರೆಸಿಹುದು ಪಿಕವೊಂದು!
ನಾಗರಿಕ-ನರ-ನಾರಿ ವದನ-ಕಮಲದ ಜೇನು
ಸವಿದು ಜೇಂಕರಿಸಿ ನಲಿವಾರಡಿಯೆ ನೀನೇನು?
ನಿದ್ದೆವೆಣ್ಣಿನ ಕೈಯ ಬೀಣೆ! ನಿನ್ನಯ ದನಿಯ
ಮಾಧುರಿಗೆ ಮಾನವನು ಮೈಮರೆತು ಮನದಣಿಯ
ತಾಳವಿಕ್ಕುವ ಭರಕೆ, ಸೂಕ್ಷ್ಮ ಜೀವಿಯೆ, ನೀನು
ನಜ್ಜುಗುಜ್ಜಾಗುವುದು' ಇಹುದು!— ಎಂತಹ ದುಗುಡ!
ಓ ನುಸಿಯೆ! ಪ್ರೇಮಗಾನದ ಸಸಿಯೆ, ಸಂತಸಿಯೆ!
ನಿನ್ನನರಿಯದೆ ಬೈವ ಮಾನವನೆ ಕಡು ಕುರುಡ!
ಇದಕೊ ನಿನಗೆನ್ನ ನೆತ್ತರು ಕಾಣ್ಕೆ-ಹಸಿ-ಬಿಸಿಯೆ,
ಬೇಡುವರ ರೇಡಿಯೋ ನೀನು, ಬಡವರ ಬಂಧು,
ಹರಕು ಗೋಡೆಯ ವಾಸಿ, ನಿನಗೆ ನಮಿಸುವೆನಿಂದು!

**—ಮುಕಕ ಮೋಹನ.**

# ನಗೆಯ ದಗೆ

''ಎಂತಾ ಹುಡುಗಾಟಿಕೆಯೋ ನಿನ್ನದು! ಅವಳ ಮುಖ ನೋಡಿದಾಗಲೆಲ್ಲಾ ಮಂಗನ ಹಾಗೆ ಹಲ್ಲು ಬಿಡುತ್ತೀಯಲ್ಲಾ, ಪೆಟ್ಟು ತಿನ್ನುವ ಬುದ್ಧಿಯಿದು'' ಹೀಗೆ ನಾಣು ಆಗಾಗ ಕಿಟ್ಟುವಿಗೆ ಬುದ್ಧಿ ಹೇಳುವ ವಾಡಿಕೆ. 'ನಾಣುವಿಗೆ ಅದೆಲ್ಲಾ ಎಲ್ಲಿ ತಿಳಿಯುತ್ತದೆ ಪಾಪ! ಅವ ಸತ್ಯಂಭಟ್ಟ. ಇಲ್ಲವಾದರೆ ನಳಿನಿ ನನ್ನನ್ನು ನೋಡಿ ಕೊರಳು ಕೊಂಕಿಸಿ ವೈಯ್ಯಾರದಿಂದ ನಗಬಹುದಂತೆ; ನಾನು ನಗಬಾರದೆಂದರೇನು?' ಕಿಟ್ಟುವಿನ ಯೋಚನೆ ಹೀಗೆ. ನಳಿನಿ ಸದಾ ನಗುತ್ತಿರುವುದರಲ್ಲಿ ಅರ್ಥವಿಲ್ಲ, ಸತ್ಯಕ್ಕೂ ಅದರಲ್ಲಿ ಏನೊಂದೂ ಅರ್ಥವಿಲ್ಲ. ಕಿಟ್ಟುವಿಗೆ ಮಾತ್ರ ಆ ನಗುವಿನಲ್ಲಿ ಅರ್ಥವಿರಬಹುದು ಎಂದಿಷ್ಟೇ ಅಲ್ಲ, ಅರ್ಥವಿರಲೇ ಬೇಕು ಎಂದು ತೋರುತ್ತಿತ್ತು. ಯಾವ ಅರ್ಥವಿದ್ದೀತು? ಪ್ರಾಯ ಬಂದ ಹುಡುಗಿ ಜವ್ವನಿಗರನ್ನು ಕಂಡು ನಗುವುದರಲ್ಲಿ ಬೇರಾವ ಅರ್ಥವಿದೆ?

* * * * * *

ಈ ದಿನವೂ ನಾಣುವನ್ನು ಒತ್ತಾಯ ಮಾಡಿ ತೋಟಕ್ಕೆ ಕರದುಕೊಂಡು ಹೋದ ಕಿಟ್ಟು. ಕಿಟ್ಟುವಿನ ಆಂತರ್ಯ ಗೊತ್ತಿದ್ದೂ ನಾಣು ಹೋಗಬಾರದಿತ್ತು. ನಾಣುವಿಗೆ ಸಂಜೆಯ ತಿರುಗಾಟಕ್ಕೆ ಹೋಗುವದೆಂಬ ನೆವ ಸಿಕ್ಕಿದೆ. ತೋಟಕ್ಕೆ ಹೋದುದು ತಪ್ಪೆನ್ನಿಸುವಂತಿಲ್ಲ. ಅಷ್ಟಾದರೆ ಸರಿ, ಮತ್ತೇನು ತಲೆ ಹೋಗುವ ಸಂದರ್ಭವಿಲ್ಲವಷ್ಟೆ? ಕಿಟ್ಟು ನಾಣು ತೋಟಕ್ಕೆ ಹೋಗಿ ದಂಡೆಯಲ್ಲಿ ಕುಳಿತರು. ಹಾಗೆ ಕುಳಿತವರು ಸುಮ್ಮನಿರುವದೆಂದರೆ ಸಾಧ್ಯವೆ? ಜತೆಹಕ್ಕಿಗಳ ವಿಷಯವನ್ನೆತ್ತಿ ಮೊದಲು ಮಾಡಿದವರು ಆ ತೋಟದ ವರ್ಣನೆಯನ್ನು ಮುಗಿಸಿ ತೃಪ್ತಿ ದೊರೆಯದೆ, 'ಈ ತೆಂಗಿನ ತೋಟವೇ ಹೂತೋಟವಾಗಿರ ಬೇಕಿತ್ತು' ಎಂಬಲ್ಲಿ ತನಕ ಬಂದರು. ಈ ಬಯಕೆಯನ್ನು ನಾಣು ತೋರಿಸಿದ. ಕಿಟ್ಟು ಆ ಹೂದೋಟದ ಶೃಂಗಾರವನ್ನು ಹೆಚ್ಚಿಸುವ ಬಯಕೆಯಿಂದ 'ಅದರಲ್ಲೊಂದು ಮಲ್ಲಿಗೆಯ ಮೊಗ್ಗಿನಂತಾ ಹುಡುಗಿಯೂ ಇರಬೇಕಿತ್ತು' ಎಂದ. ಆ ಹುಡುಗಿಯನ್ನು ನೋಡುವೆನೆಂಬ ಆತುರವು ಅದೇಕೋ ಆಗಲೇ ಅವನ ನೋಟದಲ್ಲಿತ್ತು. ಕಿಟ್ಟುವಿಗೂ ಅದರ ಅರ್ಥವಾದುದರಿಂದ ಅವ ಓರೆಗಣ್ಣಿನಿಂದ ಇವನ ಚೇಷ್ಟೆಗಳನ್ನು ಕಂಡು ತನ್ನಲ್ಲೇ ನಗುತ್ತಿದ್ದ; ಮಾತುಗಳ ನಡುನಡುವೆ ಆಧಾರಕ್ಕಾಗಿ 'ಅಲ್ಲವೇನೋ ನಾಣೂ?' ಎಂದು ಕಿಟ್ಟು ಕೇಳಿದಾಗಲೆಲ್ಲಾ ಅದಕ್ಕೆ ಸಮ್ಮತಿಯೆಂಬ ಅರ್ಥ ಬರುವಂತೆ ಆ ನಗೆಯನ್ನೇ ಉಪಯೋಗಿಸುತ್ತಿದ್ದ. ಕಿಟ್ಟು ಒಮ್ಮೆಯೇ ಉತ್ಸಾಹದ ಧ್ವನಿಯಲ್ಲಿ 'ನಾಣೂ' ಎಂದ. ನಾಣೂ ಅವನನ್ನನುಸರಿಸಿ ದಕ್ಷಿಣಕ್ಕೆ ನೋಡಿದ. ನಳಿನಿ ಬರುತ್ತಿದ್ದಳು. ಕಿಟ್ಟು ಪ್ರಸಂಗಾವಧಾನತೆಯನ್ನು ತೋರಿಸಿ ''ಇದು ಹೂದೋಟವಾಗಿಯೇ ಹುಡುಗಿ ಬರಬೇಕೆಂಬ ನಿಯಮವಿಲ್ಲ; ನಮ್ಮ ಮೆಚ್ಚಿನ ಹುಡುಗಿ ಕಾಸರಕನ ಕಾಡಿಗೆ ಕಾಲಿಟ್ಟರೂ ನಮ್ಮ ಪಾಲಿಗದು ಹೂದೋಟ! ಅಲ್ಲವೇ ನಾಣೂ' ಎಂದ. 'ಆಗಿರಬಹುದು ಮಾರಾಯಾ' ಎಂದ ನಾಣು. ಹಾಗೆಲ್ಲಾ ಕುಲೀನ ಮಹಿಳೆಯ ಮಂದೆ ಮಾತನಾಡುವದು ಅನುಚಿತವೆಂಬ ಅರ್ಥ ಬರುವಂತೆ ಕಿಟ್ಟುವಿನ ಮುಖ ನೋಡುತ್ತಾನೆ - ಕಿಟ್ಟು ನಳಿನಿಯನ್ನು ನೋಡಿ ನಗುತ್ತಾ ಇದ್ದ; ಕೊಡಪಾನವನ್ನು ಬಾವಿಗಿಳಿಯ ಬಿಟ್ಟು ಮುಳುಗಿಸಲು ಬಾಗಿದ್ದ ನಳಿನಿಯ ಮುಖದಲ್ಲಿಯೂ ಮುಗುಳ್ನಗೆ ಮಿನುಗುತಿತ್ತು. ನಾಣು ಯೋಚಿಸಿದ— ಕೆಲವರ ಮುಖದಲ್ಲಿ ಸದಾ ನಗುವಿರುವದುಂಟು, ಉದ್ದೇಶವಿಲ್ಲದಿದ್ದರೂ ನಗುವಿರುವದುಂಟು. ಅಥವಾ ನಳಿನಿ ಕಿಟ್ಟುಗಳೊಳಗೆ ಹೇಗುಂಟೋ ಯಾರಿಗೆ ಗೊತ್ತು? ಅವ ಮತ್ತೊಮ್ಮೆ ನಳಿನಿಯ ಮುಖ ನೋಡಿದ. ನೀರಿನ ಕೊಡವನ್ನೆತ್ತಿ ಕಂಕುಳಲ್ಲಿಟ್ಟುಕೊಂಡು ನಳಿನಿ ಹೊರಟಿದ್ದಳು. ಮುಖದಲ್ಲಿ ಮೊದಲಿನ ಮುಗುಳುನಗೆಯೇ ಮಿನುಗುತ್ತಿತ್ತು; ಕಿಟ್ಟುವಿನ ಮುಖವು ಆ ನಗೆಯ ಅರ್ಥ ಕಂಡು ಹಿಡಿದವನ ಮುಖದಂತೆ ಹಲವು ವಿಧ ಚೇಷ್ಟೆಯಲ್ಲಿತ್ತು. ನಾಣು ನೋಡುತ್ತಿದ್ದಂತೆ ''ಈಗ ಬಂದೆ ನಾಣೂ'' ಎನ್ನುತ್ತಾ ಕಿಟ್ಟು ಎದ್ದ.

* * * * * *

ಕಿಟ್ಟು ಹಿಂದಿರುಗಿ ಬಂದವ ಉಬ್ಬಸಬಿಡುತ್ತ ''ಏಳು ಏಳು ಹೋಗೋಣ'' ಎಂದು ಅವಸರಪಡಹತ್ತಿದ. ಅವನ ಗಾಬರಿಯಿಂದ ಅನುಮಾನ ಬಂದು ಹುಚ್ಚನ ಕೈ ನೋಡುತ್ತಾನೆ — ಕೈಯಲ್ಲೊಂದು ಹಸೀಗಾಯ! ತಡ ಮಾಡದೆ ಎದ್ದ ನಾಣು. ಆ ಸ್ಥಳ ದಾಟಿ ಬಂದ ಮೇಲೆ ನಗು ತಡೆಯಲಾಗದೆ ನಾಣು ಹೇಳಿದ 'ಮಹರಾಯಾ, ಅವಳು ನೀರಿಗೆ ಬಂದಲ್ಲಿಯಾದ್ದರಿಂದ ಕೊಡಪಾನದ ಕಾಲಿನ ಪೆಟ್ಟಿನಿಂದಲೆ ತೀರಿತೆನ್ನುವ; ಅವಳು ಕಟ್ಟಿಗೆ ಕಡಿಯುತ್ತಿರುವ ವೇಳೆ ನಿನಗೆಲ್ಲಿಯಾದರೂ ಈ ಬುದ್ಧಿ ಬರುತ್ತಿದ್ದರೆ ನಿನ್ನ ಕೈಯೇ ಹೋಗಿಬಿಡುತ್ತಿತ್ತು; ಸದ್ಯಕ್ಕೆ ಇದೇ ಲಾಭ!'' ಗೊಳ್ಳೆಂದು ನಕ್ಕ ನಾಣು. ನಳಿನಿಯ ನಗುವಿಗೆ ಅರ್ಥವಿರಲಿಲ್ಲವಾದರೂ ನಾಣುವಿನ ನಗುವಿಗಿತ್ತು.

—ಮು. ವಿ.

# ವಕೀಲರೇ ಫೋರ್ಜರಿ ಮಾಡಿದರೆ ಹೇಗೆ?

## ಮದ್ರಾಸು ಹೈಕೋರ್ಟಿನ ತೀರ್ಮಾನ.

**'ಬೇಲಿಯೇ ಹೊಲ ಮೇದ ಹಾಗೆ' ಎಂಬೊಂದು ಗಾದೆ. ಬೇಲಿಯು ಹೊಲ ಮೇಯುವುದಿಲ್ಲ—ಆ ರೀತಿಯ ಮನುಷ್ಯರಿರುವುದರಿಂದ ಮಾತ್ರ ನಮ್ಮಲ್ಲಿ ಈ ಗಾದೆ ಇದೆ. ಈ ತಂದೆ ಮತ್ತು ಮಗ—ವಕೀಲರುಗಳು—ಅಂಥವರಲ್ಲಿ ಇಬ್ಬರು !**

ಮದ್ರಾಸು ಹೈಕೋರ್ಟಿನವರು **ಇದೇ** ತಾ ೧೪-೯-೩೮ರಲ್ಲಿ ಒಂದು **ತಕ್ಷೀರಿನ** ಕುರಿತು ಕೊಟ್ಟ **ತೀರ್ಮಾನವು** ಸ್ವಾರಸ್ಯದ್ದಿದೆ. **ವಿಜಯನಗರಮಿನ** ಶ್ರೀ. ಎಸ್. **ವೆಂಕಟರತ್ನಮ್**, ಎಡ್ವೊಕೇಟ್ **ಮತ್ತು** ಅವರ ತಂದೆ ಶ್ರೀ. ಎಸ್. **ಹಯಗ್ರೀವ** ರಾವ್, ಸೆಕೆಂಡ್ ಗ್ರೇಡ್ ಪ್ಲೀಡರ್, ಇವರಿಬ್ಬರ **ವಕಾಲತನ್ನು** ಅನುಕ್ರಮವಾಗಿ **ಅರುತಿಂಗಳು** ಮತ್ತು ಎರಡು ವರ್ಷಗಳವರೆಗೆ ಅಮಾನಾತು ಪಡಿಸಿರುವದಲ್ಲದೆ ಜಿಲ್ಲಾ ಜಡ್ಜರ ತಿರ್ಮಾನವನ್ನು ಹೈಕೋರ್ಟು ಕಠಿನವಾಗಿ **ಟೀಕಿಸಿರುವದು.** ತಕ್ಷೀರಿನ **ರೀತಿಯು** ಹೀಗಿದೆ-

೧೯೩೭ನೇ ಸೆಪ್ಟೆಂಬರದಲ್ಲಿ **ಎಡ್ವೊಕೇಟ್** ವೆಂಕಟಸ್ವಾಮಿಯ**ವರು ವಿಜಯನಗರಮಿನ** ಮುನ್ಸಿಫ್ **ಕೋರ್ಟಿನಲ್ಲಿ** ವಾದಿಕಡೆಯ ವಕೀಲ**ರಾಗಿ ಒಂದು ವ್ಯಾಜ್ಯ** ತಂದಿದ್ದರು. **ವ್ಯಾಜ್ಯಕ್ಕೆ** ಸಂಬಂಧಪಟ್ಟ ಪ್ರತಿ**ವಾದಿಯ ಸೊತ್ತು** ಮತ್ತು ಬೆಳೆ**ಯನ್ನು** ತತ್ಕಾಲಿಕವಾಗಿ ಅಮಾನಾ**ತಾಗಿಡುವ** ಇಂಜಕ್ಷನ್ ಹುಕುಂ **ಕೊಡಬೇಕೆಂಬ** ಅರ್ಜಿಯೂ ಜತೆ**ಯಲ್ಲಿ ಬಂದಿತ್ತು.** ಮೇಲಿನ ವಕೀಲರ ತಂದೆ ಶ್ರೀ. ಹಯಗ್ರೀವ ರಾಯರು ಆ ಕುರಿತು ವಾದಿಸಿದ್ದರು. ಮುನ್ಸೀಫರು ಪ್ರತಿವಾದಿಯರ ಹೇಳಿಕೆಗಾಗಿ ನೋಟೀಸು ಕೊಡಲು ಹುಕುಂ ಕೊಟ್ಟರು. ತಂದೆ, ಮಗ, ಇಬ್ಬರು ವಕೀಲರೂ ಸೇರಿ ಸೊತ್ತುಗಳ ಇಂಜಕ್ಷನಿನ ಸುಳ್ಳು ನೋಟೀಸನ್ನು ಪ್ರತಿವಾದಿಗೆ ಕೊಟ್ಟರಂತೆ. ಇದು ತಿಳಿದುಬಂದೊಡನೆಯೇ ಡಿಸ್ಟ್ರಿಕ್ಟ್ ಮುನ್ಸೀಫರು ತಪ್ಪನ್ನು ಸರಿಪಡಿಸಿದ್ದಲ್ಲದೆ, ಕೂಡಲೇ ಡಿಸ್ಟ್ರಿಕ್ಟ್ ಜಡ್ಜರಿಗೆ ಬರೆದರು. ಈ ಎಲ್ಲಾ ಸಂಗತಿಗಳ ಕುರಿತು ಸರಿಯಾದ ವಿಚಾರಣೆ ನಡಿಸಿ ರಿಪೋರ್ಟು ಮಾಡಬೇಕೆಂದು ಹೈಕೋರ್ಟಿನಿಂದ ಜಿಲ್ಲಾ ಜಡ್ಜರಿಗೆ ಹುಕುಂ ಬಂತು. ಆ ವಕೀಲರ ಮೇಲಿನ ಆರೋಪಗಳಿಗೆ ರುಜುವಾತಿಲ್ಲವೆಂದೂ, ಅವರಮೇಲೆ ಯಾವದೇ ಕಾರ್ಯ ಕೈಕೊಳ್ಳುವ ಅಗತ್ಯವಿಲ್ಲವೆಂದೂ ಜಿಲ್ಲಾ ಜಡ್ಜರು ಹೈಕೋರ್ಟಿಗೆ ಬರೆದರು. ಕೇಸು ಮದ್ರಾಸ್ ಹೈಕೋರ್ಟಿನ ಮುಂದೆ ಬಂತು ಆರೋಪಿತರ ಕಡೆಯಿಂದ ಬಲವಾದ ಸಾಧನೆ ನಡೆಯಿತು. ನೋಟೀಸಿನ ಭಾಷಾಂತರದಲ್ಲಿ ದೋಷಗಳಿದ್ದುವೆಂಗೂ. ಪದ್ಧತಿಯಂತೆ ಕ್ಲಾರ್ಕನು ನೋಟೀಸು ಬರೆಯುವಾಗ ಆದ ಪ್ರಮಾದವೆಂದೂ, ಆರೋಪಿತರ ಪೈಕಿ ತಂದೆಯು ತಪ್ಪುಗಾರನಾಗ ಬಹುದಾದರೂ ಮಗನು ಹೊಸ ವಕೀಲನಾಗಿದ್ದು ಕೋರ್ಟಿನಲ್ಲಿ ನಡೆದುದನ್ನು ಅರಿತಿಲ್ಲ ಮಾತ್ರವಲ್ಲ ಊರಲ್ಲಿ ಕೂಡ ಇರಲಿಲ್ಲವಾದುದರಿಂದ ನಿರಪರಾಧಿಯೆಂದೂ ಸಾಧಿಸಲಾಯಿತು. ಚೀಫ್‌ಜಸ್ಟೀಸರು ತನ್ನ ಜಜ್ಜ್‌ಮೆಂಟಿನಲ್ಲಿ "ಜಿಲ್ಲಾ ಜಡ್ಜರು ಈ ವ್ಯವಹರಣೆಯಲ್ಲಿ ಸತ್ಯಸ್ಥಿತಿಯ ಕಡೆಗೆ ಪೂರ್ಣವಾಗಿ ಕಣ್ಣುಮುಚ್ಚಿದ್ದರು" ಎಂದು ಬರೆದಿದ್ದಾರೆ. ಈ ಪ್ರಶ್ನೆಗೆ ಸಂಬಂಧಪಡದ, ಸಣ್ಣ ಪುಟ್ಟ ವಿಷಯಗಳ ವಿವರವನ್ನು ಜಿಲ್ಲಾ ಮುನ್ಸೀಫರು ನೆನಪಿನಲ್ಲಿಡದುದು ಕೊರತೆಯೆನ್ನುವ ಜಿಲ್ಲಾ ಜಡ್ಜರು, ಅಪ್ರಾಮುಖ್ಯ ವಾದವನ್ನು ಎತ್ತಿಹಿಡಿದರೆಂದು ಚೀಫ್ ಜಸ್ಟೀಸರು ಟೀಕಿಸಿ, ಜಡ್ಜರ ರಿಪೋರ್ಟಿಗೆ ಲಕ್ಷ್ಯವೀಯುವ ಅಗತ್ಯವೇ ಉಳಿದಿಲ್ಲವೆಂದಿರುವರು. ಮೊದಲನೇ ಆರೋಪಿಯಿದ್ದೇ ಫೋರ್ಜರಿ ನೋಟೀಸು ತಯಾರಿಸಲ್ಪಟ್ಟಿತಲ್ಲದೆ, ಎರಡನೇ

(೧೪ನೇ ಪುಟ ನೋಡಿರಿ)

ಅಂಚೆಚೀಟಿ ಸಂಗ್ರಾಹಕರ ಜೀವನ ಚರಿತ್ರೆ.



# ಕೌಂಟ್ ಲಿಯೋ ಟಾಲ್‌ಸ್ಟಾಯ್

ಬರೆದವರು:
ಶ್ರೀ. ಹಯವದನ ರಾಯರು.

[ ಈ ಲೇಖನವು ಬಹಳ ಪರಿಶ್ರಮದಿಂದ ಬರೆಯಲ್ಪಟ್ಟಿದೆ. ಮಂಜೇಶ್ವರ, ಗದಗ, ಧಾರವಾಡ, ಹುಬ್ಬಳ್ಳಿ ಮೊದಲಾದೆಡೆಗಳಲ್ಲಿರುವ ಶಿಲಾಶಾಸಗಳ ಆಧಾರದ ಮೇಲೆ ಕೆಳಗಿನ ವಿಚಾರಗಳು ಧೈರ್ಯದಿಂದ ಹೇಳಲ್ಪಟ್ಟಿವೆ.

—ಶ್ರೀ. ಹ. ರಾ. ]

ಟಾಲ್‌ಸ್ಟಾಯ್! ನೀವೀ ಹೆಸರನ್ನು ಎಂದಾದರೂ ಕೇಳಿರಬೇಕು. ಟಾಲ್‌ಸ್ಟಾಯ್ ಎಂಬುದನ್ನು ಕೇಳಿರದಿದ್ದರೆ "ತ್ರಾಳಿತ್ತ್ರಾಯ" ಎಂಬುದನ್ನಾದರೂ ಕೇಳಿರಬಹುದು. ಮೇಲಿನ ಹೆಸರುಗಳಿಗೆ ಇರುವ ಏಕಮಾತ್ರ ವ್ಯತ್ಯಾಸವೆಂದರೆ "ಟಾಲ್‌ಸ್ಟಾಯ್" ಯೆಂಬುದು ತತ್ಸಮ. "ತಾಳಿತ್ತ್ರಾಯ" ಎಂಬುದು ತದ್ಭವ. ಮೊದಲನೆಯ ಹೆಸರನ್ನು ಉಚ್ಚರಿಸುವುದು ಕಷ್ಟವಾದುದರಿಂದ ನಾನು ತದ್ಭವವನ್ನೇ ಉಪಯೋಗಿಸುತ್ತೇನೆ.

∴

ತಾಳಿತ್ತ್ರಾಯರು ನೌಸ್ಕಿ ಪ್ರಾಸ್ಪೆಟ್ಕದಲ್ಲಿ ಹುಟ್ಟಿದೊಡನೆಯೇ ಅಸಾಧ್ಯ ಪ್ರಮಾಣದಲ್ಲಿ ಹಿಮ ಬೀಳಲಾರಂಭವಾಯಿತು. ಹಲವಾರು ಮಂದಿ ಚಳಿಯಿಂದ ನಡುಗಿದರು. ಆದರೆ ರಷ್ಯದ ಪೀಟರ್ಸ್‌ಬರ್ಗಿನಲ್ಲಿ ಜನರು ಎಂದಿನಂತೆ ಬಟಾಟೆಯ ಕ್ರಯ ಕೇಳುವುದೇ ಮೊದಲಾದ ಕೆಲಸವನ್ನು ಮಾಡುತ್ತಾ ಹೋದರು. ಟಾಲ್‌ಸ್ಟಾಯ್‌ರವರು ಹುಟ್ಟಿದ್ದು "ಕರ್ಝೂನ್" ಎಂಬಲ್ಲಿ. ಈ ಸ್ಥಳವು ವಿದ್ಯೆ ಮತ್ತು ಸಂಸ್ಕೃತಿಯ ಕೇಂದ್ರವಾಗಿದ್ದಂತೆಯೇ ಗೋದಿರೊಟ್ಟಿ ಮತ್ತು ಬಟಾಟೆ ವಿಕ್ರಯದ ದೊಡ್ಡ ಕೇಂದ್ರವಾಗಿತ್ತು. ನೀವು ಅಂತರ್‌ರಾಷ್ಟ್ರೀಯ ರಾಜಕಾರಣವನ್ನು ತಿಳಿದವರಾಗಿದ್ದರೆ ಆ ಕಾಲದಲ್ಲಿದ್ದ ಮಹಾವ್ಯಕ್ತಿಗಳ ಪರಿಚಯವನ್ನು ಮಾಡಿಕೊಡುವುದರಿಂದ ನಿಮಗೆ ತುಂಬಾ ಸಂತೋಷವಾಗಬಹುದು.

∴

ತಾಳಿತ್ತ್ರಾಯರು ಹುಟ್ಟಿದ ಸಮಯದಲ್ಲಿ ಟರ್ಜೆನೆವ್ ಎಂಬವ ಎಲ್ಲಾ ಸಮಯಗಳಲ್ಲಿಯೂ ಎಡೆಬಿಡದೆ ಚುಟ್ಟಾ ಸೇದುತ್ತಿದ್ದುದಲ್ಲದೆ ವೋಲ್ಗಾ ನದಿಯ ಗಟ್ಟಿಕಟ್ಟಿದ ನೀರಿನಲ್ಲಿ ಮೀನು ಹಿಡಿಯುತ್ತಿದ್ದನು. ಶಾಂತಿಸೈನ್ಯದ ಸ್ಥಾಪನಾಕಾರ್ಯವನ್ನೂ ನಡೆಸುತ್ತಿದ್ದನು. ಕ್ರೊಪೋಟೊಕಿನ್‌ರವರು "ಯುದ್ಧ ಮತ್ತು ಶಿಕ್ಷೆ" ಎಂಬ ಮಹಾ ಪುಸ್ತಕವನ್ನು ಬರೆಯುತ್ತಿದ್ದುದಲ್ಲದೆ ಹೆಚ್ಚಾಗಿ ಇಡೀ ದಿನ ತಮ್ಮೊಳಗೇ ಮಾತಾಡುತ್ತಿದ್ದರು. ರಾಸ್ಪುಟನ್‌ರವರು ತಮ್ಮ ಕಪ್ಪು ಗಡ್ಡವನ್ನು ಸವರುತ್ತಾ ಹೋತಗಳನ್ನು ನಾಚಿಕೆಗೀಡು ಮಾಡುತ್ತಿದ್ದರು. ಕರ್ಝೂನ್‌ನಲ್ಲಿ ಹುಟ್ಟಿದ ಟಾಲ್‌ಸ್ಟಾಯರು ಅಮೇಕದ ಅಧ್ಯಕ್ಷರಾಗುವರೆಂದು ಯಾರೂ ಭಾವಿಸಿದ್ದಿಲ್ಲ. ಮದ್ರಾಸಿನ ರಾಜಗೋಪಾಲಾಚಾರ್ಯರ ಮದ್ಯಪಾನ ನಿಷೇಧ ಮಸೂದೆಯನ್ನು ಆ ಮಗುವು ಸಮರ್ಥಿಸುವುದೆಂದು ಯಾರೂ ಭಾವಿಸಲಿಲ್ಲ. ಟೆಚ್‌ವೊಸ್ಕಿಯು ಕೂಡಾ ರಷ್ಯದಲ್ಲಿ "ಯುರೋಪಿನ ರೋಗಿ" ಯೆಂಬಭಿದಾನವನ್ನಾಂತು ಹಲವು ಪುಸ್ತಕಗಳನ್ನು ಬರೆದು ಕವಿರನ್ನನ ಪ್ರಶಂಸೆಗೆ ಪಾತ್ರನಾಗಿದ್ದನು. ಪ್ರಾಯಶಃ ಕರ್ಝೂನಿನಂಥ ಒಂದು ಸ್ಥಳವು ಸಮಸ್ತ ಜಗತ್ತಿನಲ್ಲೇ ಇರಲಿಕ್ಕಿಲ್ಲ.

∴

ಟಾಲ್‌ಸ್ಟಾಯ್ ಹುಟ್ಟುವಾಗಲೆ ಅವನಿಗೆ ಆರು ಅಡಿ ಉದ್ದದ ನರೆತ ಗಡ್ಡವಿತ್ತು. ಹುಟ್ಟಿದೊಡನೆಯೇ ಅವನು ತನ್ನ ತಾಯಿಗೆ "ಕಲೆಯ ಮಹತ್ವ"ದ ಕುರಿತು ಮೂರು ತಾಸುಗಳ ತನಕ ಪ್ರಚಂಡ ಭಾಷಣವನ್ನು ಕೊಟ್ಟಿದ್ದಾನೆ. ಚಿಕ್ಕಂದಿನಲ್ಲಿಯೇ ಅವನು ಪ್ರಖ್ಯಾ

ಕನಾದುದಲ್ಲದೆ ತನ್ನ ಏಳನೆಯ ವಯಸ್ಸಿನಲ್ಲಿ ವಿಶ್ವವಿದ್ಯಾಲಯದ ಮಹೋಪಾಧ್ಯಾಯನಾಗುವ ಭಾಗ್ಯವು ಅವನದಾಯಿತು.

∴

ಟಾಲ್‌ಸ್ಟಾಯ್ ಹುಟ್ಟುವಾಗ ಸಾನು "ಕಝಾನಿ"ಸಲ್ಲಿರದಿದ್ದರೂ ಎಂಟು ವರುಷಗಳ ನಂತರ ತರಕಾರೀ ವಿಕ್ರಯದ ಸಂಬಂಧವಾಗಿ ರಷ್ಯಕ್ಕೆ ಹೋಗಿದ್ದುದರಿಂದ ಅವನನ್ನು ಕಾಣಲು ಸಾಧ್ಯವಾಯಿತು. ಟಾಲ್‌ಸ್ಟಾಯ್‌ನ ವ.ನೆಯ ಕಿಟಕಿಯಿಂದ ನಾನು ಇಣಿಕಿ ನೋಡಿದ ದೃಶ್ಯವನ್ನು ಎಂದೂ ಮರೆಯುವಂತಿಲ್ಲ. ಒಂದೇ ಬಾರಿ ಇಪ್ಪತ್ತು ಜನರೊಡನೆ ತಾಳೆಶ್ತಾಯರು ಮಾತನಾಡುತ್ತಿದ್ದರು. ಆ ಆರು ಅಡಿ ಉದ್ದದ ಗಡ್ಡವಿದ್ದ ಮುಖದಿಂದ ಮಾತುಗಳು ಹೊರಗೆ ಬರುವುದನ್ನು ನೋಡಿದಾಗ ಶೌಕತಾಲಿಯವರ ಮನೆಯಲ್ಲಿದ್ದ ದೊಡ್ಡ ಹೋತನ ನೆನವು ಬಂದೇಬಿಟ್ಟಿತು. ಅವರ ಮಾತುಕತೆಗಳು ಅತ್ಯಂತ ಗಂಭೀರವಾಗಿದ್ದುವು. ಶಿಶು ತಯಾರಿ ಕೈಗಾರಿಕೆ, ಮಿತಸಂತತಿ, ಮೊದಲಾದ ಗಹನ ವಿಚಾರಗಳ ಕುರಿತು ಅವರು ಚರ್ಚಿಸುತ್ತಿದ್ದರು. ಕಿಟಕಿಯ ಬಳಿಯಲ್ಲಿ ನಿಂತವನಿಗೆ ಅತ್ತಿತ್ತ ಚಲಿಸಲು ಮನಸ್ಸಾಗದೆ ಏಳು ದಿನಗಳ ತನಕ ಅಲ್ಲಿಯೇ ನಿಂತು ಹಿಂದೆ ಬಂದೆನು. ಚೀಲದಲ್ಲಿದ್ದ ಆಳಸಂಡೆ, ಮತ್ತು ಬೆಂಡೆ ಕಾಯಿಗಳು ಕೊಳೆತುಹೋಗಿದ್ದುವು.

∴

ತಾಳೆಯತ್ತಾರನ್ನು ಐದು ವರುಷಗಳ ತನಕ ಕಾಣುವ ಮತ್ತೊಂದು ಸುಯೋಗವು ನನಗೊದಗಿತು. ಅದು ಅವರು ಕೀರ್ತಿಯ ತುತ್ತತುದಿಗೇರುತ್ತಿದ್ದ ಕಾಲವಾಗಿತ್ತು. ಸಂಗೀತದಲ್ಲಿ ಟಾಲ್‌ಸ್ಟಾಯರು ತ್ಯಾಗರಾಯರಿಗಿಂತಲೂ ಮಿಗಿಲಾಗಿದ್ದರಂತೆ. ಒಮ್ಮೆ ರಷ್ಯದ ಧೊರೆ ಝಾರರೆದುರು ಅವರು ಹಾಡುವಾಗ ಝಾರರಿಗೆ ಅನಿರೀಕ್ಷಿತವಾಗಿ ನಿದ್ದೆ ಬಂದು ಅವರು ಸಿಂಹಾಸನದಿಂದ ಕೆಳಗುರುಳಿ ಅವರ ಪಕ್ಕೆಲುಬುಗಳಲ್ಲಿ ಒಂದು ತುಂಡಾಯಿತಂತೆ. ಈಗ ಕೂಡಾ ಝಾರರು ಗುಡ್ಡೆಗಳಲ್ಲಿ ಕೆಲಸ ಮಾಡುವಾಗ ಆ ಪಕ್ಕೆಲುಬು ಅವರನ್ನು ತುಂಬಾ ಉಪದ್ರವಿಸುತ್ತಿದೆಯಂತೆ.

∴

ಆ ಕಾಲದಲ್ಲಿ ಅವರ ಲೇಖನಿಯೂ ಸುಮ್ಮಗಿದ್ದಿಲ್ಲ. ಅವರು ತುಂಬಾ ಪುಸ್ತಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ "ಬಿಷಪ್ಪರಿಗೆ ಮದುವೆಯಾಗಬೇಡವೆ?" ಎಂಬುದು ಅವರ ಮೊದಲನೆ ಗ್ರಂಥ. "ನನ್ನ ಹೆಬ್ಬೆಟ್ಟಿನೊಡನೆ ಸಂಭಾಷಣೆ" ಯೆಂಬುದು ಮಹಾ ತಾತ್ವಿಕ ಗ್ರಂಥ. "ರಷ್ಯದಲ್ಲಿ ಸ್ವತಂತ್ರವಾಗಿ ಯಾರು ಜೀವಿಸಬಲ್ಲರು?" ಎಂಬ ಪುಸ್ತಕವು ಬಹು ಪ್ರಸಿದ್ಧವಾದುದು.

∴

ಅವುಗಳಲ್ಲದೆ ಅವರು "ಕಲೆಯೆಂದರೇನು" ಎಂಬೊಂದು ಪುಸ್ತಕ ಬರೆದಿದ್ದಾರೆ (ಈ ಪುಸ್ತಕವನ್ನು ಕಸಬುಟ್ಟಿಯೆಂದೂ ಕರೆಯುವುದಿದೆ.) ಈ ಚರಿತ್ರಾರ್ಹ ಪುಸ್ತಕದಲ್ಲಿ ತಾಳೆತ್ತಾಯರು "ಕಲೆಯೆಂದರೆ ಕಲೆಯೇ" ಎಂದು ಉತ್ತರವಿತ್ತಿರುವುದು ಬಹಳ ಸ್ವಾರಸ್ಯವಾಗಿದೆ. ಕಲೆಯ ವಿಚಾರ ಅವರಿಗೆ ಹೆಚ್ಚು ಗೊತ್ತಿರದಿದ್ದರೂ ಅವರು ನಿಕೊಲಾಯ್ ಗೋಗೋಲ್ ಎಂಬವರೊಡನೆ ಮಹಾ ವಾದವನ್ನು ಬೆಳೆಸಿದರು. "ಕಲೆಯೆಂದರೆ ಕಲೆಯಲ್ಲ" ವೆಂದು ಗೋಗೋಲರ ಪ್ರತಿಪಾದನೆ. ಈ ಚರ್ಚೆಯಿಂದಾಗಿ ಉಂಟಾದ ಜಗಳದಿಂದ ಗೋಗೋಲರು ಕೊಲ್ಲಲ್ಪಟ್ಟರು.

∴

ಆ ಬಳಿಕ ಟಾಲ್‌ಸ್ಟಾಯರು ಸಾರ್ವಜನಿಕ ಜೀವನದಿಂದ ದೂರವಾದರು. ಎರಡು ತಿಂಗಳುಗಳವರೆಗೆ ಕೋಣೆಯೊಂದರೊಳಗೆ ಕುಳಿತು ಬಾಗಿಲನ್ನು ಮೊದಲೇ ಹಾಕಿಕೊಂಡು ಯಾರನ್ನೂ ನೋಡುವುದಿಲ್ಲವೆಂದರವರು. ಅವರು ಆಗಲೇ ಸತ್ತರು ಎಂದು ಜನರು ಹೇಳುವುದಿದ್ದರೂ ನಿಜವಾಗಿ ಅವರು ಸಾಯಲಿಲ್ಲ. ಕಾರಣ–ನಾನು ಆ ಮನೆಯ ಬಳಿಯಲ್ಲಿ ಸ್ಲೇಟು ಕಡ್ಡಿ ಮಾರಿಕೊಂಡು ಹೋಗುತ್ತಿದ್ದಾಗ ಅವರು ಕೊಳಲೂದುತ್ತಾ, ಹಾಸಿಗೆಯೊಂದರ ಮೇಲೆ ಮಲಗಿಕೊಂಡು ವಾರ್ತಾಪತ್ರಿಕೆಯನ್ನು ಅಡಿಮೇಲಾಗಿ ಹಿಡಿದುಕೊಂಡು ಓದುತ್ತಿದ್ದರು. ಬುದ್ಧನಿಗೆ ಬೋಧಿವೃಕ್ಷದಡಿಯಲ್ಲಿ ಜ್ಞಾನ ಬಂದಂತೆ ಅವರಿಗೆ ಆ ಕೋಣೆಯಲ್ಲಿ ಜ್ಞಾನ ಬಂತು. ತಗಣೆಗಳ ಕಡಿತವು ಹೆಚ್ಚಾಗಿ ಅವರು ಜಾಗೃತಾವಸ್ಥೆಗೆ ಬಂದರು. ಮಿಂಚು ಮಿನುಗಿತು. ಗುಡುಗು ಗುಡುಗಿತು. ಅದೋ! ಪುಸ್ತಕ ಜ್ಞಾನವು ಸಾಕು. ದಿವ್ಯಜ್ಞಾನವು ಬೇಕು ಎಂಬ ಅಂತ

ರಾತ್ಮನ ಕರೆಯು ಅವರ ಜೇಬನ್ನು ನುಗ್ಗಿತು.

∴

ಟಾಲ್‌ಸ್ಟಾಯ್‌ರವರು ಭಾರತಕ್ಕೆ ಬಂದು ಲಾರ್ಡ್ ವಿಲ್ಲಿಂಗ್ಡನರ ರಾಜ್ಯಭಾರ ಮತ್ತು ಅವರ ಕಾರ್ಯದೆಗಳಿಗೆ ಬೆರಗಾಗಿ, ಅವರು ರುರಾರರಿಗಿಂತಲೂ ಒಂದು ಹೆಜ್ಜೆ ಮುಂದಿದ್ದಾರೆಂದು ಹೇಳಿದರು. (ಕೆಲವು ಚರಿತ್ರೆಕಾರರು ಈ ಸಂದರ್ಶನೆಯ ಕುರಿತು ತಮ್ಮ ಸಂಶಯವನ್ನು ವ್ಯಕ್ತಪಡಿಸುವುದಿದ್ದರೂ ಮಂಜೇಶ್ವರದಲ್ಲಿರುವ ಒಂದು ಶಿಲಾಲೇಖನನ್ನು ನೋಡುವಾಗ ನನ್ನ ಬರೆಹವು ಸರಿಯೆಂದು ಸ್ಪಷ್ಟವಾಗುತ್ತದೆ.) ಢಿಲ್ಲಿಯಲ್ಲಿ ಟಾಲ್‌ಸ್ಟಾಯ್‌ರವರು ಔರಂಗಜೇಬ ಬಾದಶಹರನ್ನು ಕಂಡರೆಂದೂ, ಅವರು ತಾಳಿತ್ತಾಯರಿಗೆ "ಕಾಫರುಲ್ ಉಲೆಮಾ" ಎಂಬ ಬಿರುದನ್ನು ದಯೆಪಾಲಿಸಿದರೆಂದೂ ಸಿಂಹಳ ಸಿಗ್ರಿಯಾ ಗುಹೆಯ ಕೆಲವು ಶಿಲಾ ಲೇಖನಗಳಿಂದ ವ್ಯಕ್ತವಾಗುತ್ತದೆ.

∴

ರಷ್ಯದ ಕ್ರಾಂತಿಯು ಪ್ರಾರಂಭವಾದೊಡನೆಯೇ ಟಾಲ್‌ಸ್ಟಾಯರು ಒಂದು ಉಪ್ಪಿನ ಗನಿಗೆ ಹೋದರೆಂದೂ, ಅಲ್ಲಿದ್ದ ಹೊಸ ಯಂತ್ರವೊಂದನ್ನು ಕಂಡು ನಗಾಡಿಯೇ ಸ್ವರ್ಗಸ್ಥರಾದರೆಂದೂ ತಿಳಿದು ಬಂದಿದೆ. ಆದರೆ ನನ್ನ ದೃಷ್ಟಿಯಲ್ಲಿ ಮಹಾತ್ಮಾ ತಾಳಿತ್ತಾಯರು ಜೀವಂತರಾಗಿದ್ದಾರೆ. ನಾನು ರಷ್ಯಕ್ಕೆ ಚೂರಿಗಳನ್ನು ಮಾರುತ್ತಾ ಹೋಗುವಾಗ ಅವರು ನನ್ನನ್ನು ಸ್ವಾಗತಿಸದಿರರೆಂದು ನನಗೆ ಪೂರ್ಣ ವಿಶ್ವಾಸವಿದೆ.

**(ಈ ಲೇಖನದ ಕಾಲದ ಕುರಿತು ಚರ್ಚಿಸಲಿಚ್ಛೆಯುಳ್ಳವರು ಶ್ರೀ ಹಯವದನ ರಾವ್, ಚರಿತ್ರೆ ವಿಮರ್ಶ ವಿಚಕ್ಷಣ, ದಶಮೂಲ ಮಿಶ್ರಣ, C/o ಅಂತರಂಗ, ಉಡುಪಿ; ಈ ವಿಳಾಸದೊಡನೆ ಪತ್ರವ್ಯವಹಾರ ನಡೆಸ ಬಹುದು. ಆದರೆ ಪ್ರತಿಯೊಂದು ಪತ್ರದೊಡನೆ ಒಂದು ರೂಪಾಯಿಯ ಚೀಟಿಯನ್ನು ಲಗ್ತೀಕರಿಸುವುದು ಪ್ರಾಮುಖ್ಯವಾಗಿದೆಯೆಂಬುದನ್ನು ತಿಳಿಸುವುದು ಅವರ ದೃಷ್ಟಿಯಲ್ಲಿ ಪ್ರಾಮುಖ್ಯವಾಗಿದೆ.)**

---

**ಹಿತಸೂಚನೆಗಳು**

ಜೀವವಿದ್ದಾಗ ಸಾಬೂನು ಬೇಕೇ ಬೇಕು.

. . . . . .

ಅಪ್ಪ ಮಾಡಿದನೆಂದು ಮಗ ಮಾಡಿದರೆ ಅಪರಾಧವಾದೀತು.

---

## ನನಗರಿಯದು, ನಿಮಗೆ-



**ಬೈಸಿಕಲ್ಲಿನಿಂದ ಮನೆ ಕಟ್ಟುತ್ತಾರೆಯೆ ?**

(೧೧ನೇ ಪುಟದಿಂದ)

ಆರೋಪಿಗೆ ಗೊತ್ತಿದ್ದು ನಡೆಯಿತೆಂದೂ, ಆದ್ದರಿಂದ ಅವರಿಬ್ಬರೂ ದುರ್ನಡತೆಯ ಅಪರಾಧಿಗಳಾಗುವರೆಂದೂ ತೀರ್ಮಾನವಿತ್ತಿರುವರು. ಹೊಸ ವಕೀಲನಾದ ಮಗನು ತಂದೆಯ ಪ್ರಭಾವಕ್ಕೊಳಗಾಗಿ ವರ್ತಿಸಬೇಕಾಯಿತೆಂಬುದನ್ನು ನಮೂದಿಸಿ ಶ್ರೀ. ಎಸ್. ವೆಂಕಟರತ್ನಮರನ್ನು ಈ ಹುಕುಮಿನ ತಾರೀಕಿನಿಂದ ಆರು ತಿಂಗಳವರೆಗೂ, ಶ್ರೀ. ಎಸ್. ಹಯಗ್ರೀವರಾಯರು ಸುಮಾರು ಮೂವತ್ತು ವರುಷಗಳಿಂದ ವಕಾಲತು ನೋಡುವವರಿದ್ದು ಈ ತನಕ ಅವರಮೇಲೆ ಯಾವ ಆರೋಪವೂ ಬಂದಿಲ್ಲವೆಂಬುದನ್ನು ಸೂಚಿಸಿ, ಅವರನ್ನು ಅದೇ ತಾರೀಕಿನಿಂದ ಎರಡು ವರ್ಷಗಳ ವರೆಗೂ ವಕಾಲತಿನಿಂದ ಅಮಾನಾತ್ ಇರಿಸುವ ತೀರ್ಮಾನವಿತ್ತಿರುವರು. ಜಿಲ್ಲಾ ಮುನ್ಸೀಫರು ಇಡೀ ವ್ಯವಹರಣೆಯಲ್ಲಿ ನ್ಯಾಯಪೂರ್ಣವಾಗಿ ನಡಕೊಂಡಿರುವರೆಂದೂ, ಒಂದು ಸಲ ಅವರು ರಿಪೋರ್ಟನ್ನು ಹಿಂದೆ ತೆಗೆದುಕೊಳ್ಳುವಂತೆ ಬಲವಾದ ಒತ್ತಾಯವು ನಡೆದರೂ, ಅದಕ್ಕೆ ವ್ಯತಿರಿಕ್ತವಾಗಿ ನಡೆದು ತನ್ನ ಕರ್ತವ್ಯವನ್ನು ಪಾಲಿಸಿರುವರೆಂದೂ ಜಜ್‌ಮೆಂಟನಲ್ಲಿ ನಮೂದಿಸಲಾಗಿದೆ.

---

ಹುಡುಗಿಯೊಬ್ಬಳನ್ನು ವ್ಯತ್ಯಾಸ ಮಾಡಬಹುದಾದ ಎರಡು ಅಕ್ಷರಗಳಾವುವು?

"ಪ್ರಾ—ಯ"

# ನಿಮಗೆ ಬೇಸರವಾದಾಗ ನನಗೆ ಬರೆಯಿರಿ.

ಶ್ರೀ. ಕೆ. ಜಿ. ಕುಡ್ವ, ಉಡುಪಿ.

"ಮಹಾತ್ಮಾ ಗಾಂಧಿಯವರು ಕಲವು ಸಲ ತಮ್ಮ ಲೇಖನ, ಭಾಷಣ ಮತ್ತು ಪತ್ರಿಕಾ ಪ್ರತಿನಿಧಿಗಳಿಗಿತ್ತ ಮುಲಾಖತು ಗಳ ಸಮಯ ಕೊಂಗ್ರೆಸ್ಸನ್ನು ದೂರುವವ ರಾಗಲೀ, ಅದರ ಕಾರ್ಯಕ್ರಮಗಳನ್ನು ಟೀಕಿಸುವವರಾಗಲೀ ಹೊರಗಿದ್ದು ಟೀಕಿ ಸದೆ ಕೊಂಗ್ರೆಸನ್ನು ಸೇರಿ ಅದನ್ನು ಸರಿ ಪಡಿಸಬೇಕೆಂದಿರುವರು ಈಗ ನಾಗಪುರದ ಮಾಜಿ ಪ್ರಧಾನರಾದ ಡಾ| ಖರೆಯವರು ವರ್ಕಿಂಗ್ ಕಮಿಟಿಯನ್ನೂ, ಮಹಾತ್ಮ ರನ್ನೂ, ಕೆಲವು ಕಾಂಗ್ರೆಸ್ ಮುಂದಾಳು ಗಳನ್ನೂ ದೂರುತ್ತಾರಂತೆ. ಕೊಂಗ್ರೆಸ್ಸಿನ ಒಳಗಿದ್ದೇ ಅದನ್ನು ಸರಿಪಡಿಸುವ ವಿಚಾರ ಖರೆಯವರದು. ಆದರೆ ಖರೆಯವರನ್ನು ಕೊಂಗ್ರೆಸಿನಿಂದ ಹೊರದೂಡಲು ಯೋಚಿ ಸಿರುವರಂತೆ ಮಹಾತ್ಮರು! ಇದು ನಿಜವಿರ ಬಹುದೆ? ನಿಜವೆಂದಾದರೆ ಈ ಪರಸ್ಪರ ವಿರೋಧ ಕಲ್ಪನೆಯನ್ನು ಮಹಾತ್ಮರು ಹ್ಯಾಗೆ ಸಮರ್ಥಿಸಬಹುದು?"

ಮಹಾತ್ಮರ ವಿಧಾನಗಳು ತೀರಾ ವಿಚಿತ್ರವಾದವುಗಳೆಂದು ನೀವು ತಿಳಿಯಬೇಕಾಗಿದೆ. ಅದರಲ್ಲಿಯೂ ಮಹಾತ್ಮಾ ಗಾಂಧಿಯವರು ಸಮಗ್ರ ಜಗತ್ತಿಗೇ ನವೀನವಾದ ಒಂದು ತತ್ವವನ್ನು ಪ್ರತಿಪಾದಿಸುವವರು. ಪರಮಾತ್ಮನು ಕಲ್ಪನಾತೀತನಾಗಿರುವಂತೆ ಗಾಂಧಿಯವರು ವಿಮರ್ಶಾತೀತರಾಗಿದ್ದಾರೆಂದು ಹೆಚ್ಚಿನವರು ಭಾವಿಸುತ್ತಾರೆ. ವಸ್ತುಸ್ಥಿತಿಯು ಹೀಗಿದ್ದರೂ ಸರ್ದಾರ್ ಪಟೇಲರು ಕರಾಚಿಯಲ್ಲಿ 'ಸವ್ವಾ-ಹಿಟ್ಲರ್' ಎಂದು ಹೇಳಿಕೊಂಡಿರುವಂತೆ ಈ ಪ್ರಶ್ನೆಯನ್ನು ಕೇಳಿ 'ಅತಿಮಾನುಷ' ಎಂಬ ಬಿರುದನ್ನು ನೀವು ನನ್ನಿಂದ ಪಡೆಯುತ್ತಿರುವುದು ಸಂತೋಷದ ಸಂಗತಿ.

ಮಹಾತ್ಮಾಜಿಯರ ವಿಧಾನಗಳು ವಿಚಿತ್ರವೆಂಬುದನ್ನು ಸ್ಪಷ್ಟಪಡಿಸಲು ದೂರ ಹೋಗಬೇಕಾಗಿಲ್ಲ. ಇತರರು ಕಾಂಗ್ರೆಸಿನ ಒಳಗಿದ್ದು ಅದನ್ನು ಸರಿಪಡಿಸಬೇಕೆಂದು ಹೇಳುತ್ತಿರುವಾಗ ಅವರು ಕಾಂಗ್ರೆಸಿನ ಹೊರಗಿದ್ದು ಅದರ ಘಟನೆಯನ್ನೇ ವ್ಯತ್ಯಾಸಗೊಳಿಸುವ ಏರ್ಪಾಡು ಮಾಡುತ್ತಿದ್ದಾರೆ. ಸಾಮಾನ್ಯರಿಗೂ ಮಹಾತ್ಮರಿಗೂ ಇರುವ ವ್ಯತ್ಯಾಸಕ್ಕೆ ಇದೊಂದು ನಿದರ್ಶನ

ಡಾ| ಖರೆಯವರು ಕಾಂಗ್ರೆಸಿನ ಒಳಗಿದ್ದು ಅದನ್ನು ಎಷ್ಟರವರೆಗೆ ಸರಿಪಡಿಸಲೆತ್ನಿಸುತ್ತಿದ್ದಾರೆಂದು ಮೊನ್ನೆ ನಡೆದ ಮಧ್ಯ ಪ್ರಾಂತ್ಯದ ಎಸೆಂಬ್ಲಿಯಲ್ಲಿ ಅವರು ವಿರೋಧ ಪಕ್ಷದ ಶ್ರೀ. ಜೆ. ಬಿ. ಖಪಾರ್ಡೆಯವರ ನಿಲುವಳಿ ಸೂಚನೆಗೆ ಬೆಂಬಲವಿತ್ತಿರುವುದರಿಂದಲೂ ಈ ಕುರಿತು ಕಾಂಗ್ರೆಸ್ ಪಕ್ಷವು ಅವರಿಂದ ಉದಾಹರಣೆ ಕೇಳಿರುವುದರಿಂದಲೂ ಸ್ಪಷ್ಟವಾಗುತ್ತದೆ. ನಿಜಸ್ಥಿತಿಯು ಹೀಗಿರುವುದರಿಂದ ಕಾಂಗ್ರೆಸಿನ ಒಳಗಿದ್ದು ಅದನ್ನು 'ಸರಿಪಡಿಸುವ' ಖರೆಯವರ ವಿಚಾರವು ಕೊಂಚ ಸಂಶಯಾಸ್ಪದವೆಂದು ನಿಮಗನಿಸುವುದಿಲ್ಲವೆ?

ಡಾ| ಖರೆಯವರನ್ನು 'ಹೊರದೂಡಲು' ಗಾಂಧಿಜಿಯವರು ಯೋಚಿಸಿರುವರೆಂಬುದು ಆಧಾರರಹಿತವಲ್ಲದಿದ್ದರೂ, ಡಾ| ಖರೆಯವರು ಸದ್ಯದಲ್ಲಿಯೇ ಕಾಂಗ್ರೆಸಿನಿಂದ ಹೊರಗಿರುವಂತಾಗುವುದೆಂಬುದು ಖಂಡಿತ.

ನೀವು ಹೇಳಿರುವ ವಿರೋಧ ಕಲ್ಪನೆಯನ್ನು 'ಮಹಾತ್ಮರು'ಗಳಲ್ಲದೆ ಮತ್ತಾರೂ ಸಮರ್ಥಿಸಲಿಕ್ಕಿಲ್ಲವೆಂಬುದಕ್ಕೆ ತೀರಾ ಕಳಕೆಯೆಂದು ಸಾವಿರಾರು ಬಾರಿ ಹೇಳಲ್ಪಟ್ಟ ಕ್ರಿಮಿನಲ್ ಲಾ ಎಮೆಂಡ್‌ಮೆಂಟ್ ಆಕ್ಟನ್ನು ಇತ್ತೀಚೆಗೆ ಮಹಾತ್ಮಾ ಗಾಂಧಿಯವರು ಸಮರ್ಥಿಸಿರುವುದು ಒಂದು ಉತ್ತಮ ಉದಾಹರಣೆಯಾಗಿದೆ. ಡಾ| ಖರೆಯವರನ್ನು ಮಹಾತ್ಮರು ಹೊರದೂಡಲು ಯೋಚಿಸಿರುವುದೇ ಮೊದಲಾದ ವಾರ್ತೆಗಳನ್ನು ಪ್ರಾಯಶಃ ನೀವು ಮಹಾರಾಷ್ಟ್ರದಿಂದ ಆಮದು ಮಾಡಿಕೊಂಡಿರಬಹುದು.

ಅದಂತಿರಲಿ. ನೀವು ಕಾಂಗ್ರೆಸಿನ ಒಳಗಿದ್ದು ದೂರುವವರೋ ಅಥವಾ ಹೊರಗಿರುವವರೊ?

ಂ ಂ ಂ

ನಮ್ಮ ಹಿಂದುಸ್ಥಾನದಲ್ಲೀಗ, —ಅಲ್ಲ ಮರೆತೆ— ಇಡೀ ಜಗತ್ತಿನಲ್ಲೀ ಓರ್ವರೇ (ಗಾಂಧಿ) ಮಹಾತ್ಮರಿದ್ದು ಒಬ್ಬರಿಂದಲೇ ಈಗ ನಮ್ಮ ದೇಶದಲ್ಲಿ ಬಹಳವಾಗಿ ಸತ್ಯ ಅಹಿಂಸೆಯು ಪ್ರಚಾರವಾಗಿದೆ. ಆದರೂ ಇನ್ನೂ ಪೂರ್ಣ ಸ್ವರಾಜ್ಯ

ಸಿಕ್ಕಲಿಲ್ಲ ನಮಗೆ. ಅದರ ಬದಲಾಗಿ ನಾವು ಹತ್ತಿಪ್ಪತ್ತು ಜನರನ್ನು ಮಹಾತ್ಮರೆಂದು ಕರೆಸಿ ಪೂರ್ಣ ಸ್ವರಾಜ್ಯ ಪಡೆಯಲು ಸಾಧ್ಯವಾಗಲಾರದೆ? ಒಮ್ಮೆಗೆ ಅಸಾಧ್ಯವಾಗ ಬಹುದಾದರೆ ನಮ್ಮ ದೇಶದ ಮುಂದಾಳುಗಳಲ್ಲಿ ಯಾರ್‍ಯಾರನ್ನು ನಾವು ಮಹಾತ್ಮರೆಂದು ಕರೆಯಬಹುದು? ದಯವಿಟ್ಟು ತಿಳಿಸುವಿರಾ?''

ಇಷ್ಟೊಂದು ಗಹನವಾದ ಯೋಜನೆಯನ್ನು ಕಂಡುಹಿಡಿದಿರುವುದರಿಂದ 'ಮಹಾತ್ಮ'ನೆಂಬ ಬಿರುದುನಿಮಗೇ ಸಲ್ಲಬೇಕಾಗಿದೆ. ನಮ್ಮ ದೇಶದ ಮುಂದಾಳುಗಳಲ್ಲಿ 'ಮಹಾತ್ಮ'ರಾಗುವವರು ಯಾರೂ ಇಲ್ಲದಿರುವುದರಿಂದ ನೀವು ನಿಮ್ಮಂತಹ ಹತ್ತಿಪ್ಪತ್ತು ಮಹಾತ್ಮರನ್ನು ಕಂಡುಹಿಡಿಯುವ ಕೆಲಸವನ್ನು ಕೂಡಲೇ ಪ್ರಾರಂಬಿಸುವುದು ಒಳ್ಳೇಯು.

ಇನ್ನು ಮಹಾತ್ಮರ ಸಂಖ್ಯೆಯನ್ನು ಹೆಚ್ಚಿಸುವುದರಿಂದ ಸ್ವರಾಜ್ಯ ಪ್ರಾಪ್ತಿಯಾಗಬಹುದೇ ಎಂಬ ನಿಮ್ಮ ಪ್ರಶ್ನೆಗೆ ಉತ್ತರವಾಗಿ ನಿಮಗೊಂದು ಕತೆಯನ್ನು ಹೇಳುತ್ತೇನೆ

ಒಂದಾನೊಂದು ಊರಿನಲ್ಲಿ ಒಬ್ಬ ಮಗನಿದ್ದನು. ಅವನ ಅಪ್ಪ ಸತ್ತ ಹನ್ನೆರಡನೆಯ ದಿನ ಅವನ ವೀಲನ್ನು ತೆಗೆದು ಓದಿನೋಡಿ ಮಗ ಲೆಖ್ಖ ಹಾಕಿದ. ಒಟ್ಟು ಹತ್ತು ಲಕ್ಷ ರೂಪಾಯಿಯ ಸ್ಥಿತಿ ಒಬ್ಬ ಅಪ್ಪನಿಂದ ತನಗೆ ಸಿಕ್ಕಿತು. ಯೋಚಿಸುತ್ತಾ ಯೋಚಿಸುತ್ತಾ ಅವನಿಗೊಂದು ಹೊಸ ಆಲೋಚನೆ ಹುಟ್ಟಿ ಬಹಳ ಬೇಸರವಾಯಿತು. ಅದೇನೆಂದರೆ ಒಬ್ಬ ಅಪ್ಪನಿಂದ ನನಗೆ ಹತ್ತು ಲಕ್ಷ ರೂಪಾಯಿ ಸಿಕ್ಕಿತು. ಹೀಗೆ ಹತ್ತಿಪ್ಪತ್ತು ಅಪ್ಪಂದಿರಿದ್ದರೆ ಎಷ್ಟು ಸಿಕ್ಕುತ್ತಿತ್ತೋ? ಅದಕ್ಕಾಗಿ ಅವನು ಊರಲ್ಲಿದ್ದ ಶ್ರೀಮಂತರಲ್ಲಿಗೆ ಹೋಗಿ 'ನಿಮ್ಮನ್ನು ಅಪ್ಪನೆಂದು ಕರೆಯುತ್ತೇನೆ. ನಿಮ್ಮ ಆಸ್ತಿಯನ್ನು ಸತ್ತ ಬಳಿಕ ನನಗೆ ಕೊಡುತ್ತೀರಾ' ಎಂದು ಕೇಳಿದನಂತೆ

೦ ೦ ೦

''ನಮ್ಮ ಕರ್ನಾಟಕದ ಹಲವು ಪತ್ರಿಕೆಗಳನ್ನೋದುವಾಗ ಒಂದು ಸಂಗತಿ ನನಗೆ ತಮಾಷೆಯಾಗಿ ಕಂಡು ಬರುತ್ತದೆ. ಶ್ರೀ. ಗಂಗಾಧರರಾವ್ ದೇಶಪಾಂಡೆ, ಡಾ| ಹರ್ಡೀಕರ್, ಶ್ರೀಮತಿ ಕಮಲಾದೇವಿ, ಸುಭಾಷಬಾಬು, ರಾಜೇಂದ್ರ ಪ್ರಸಾದ, ಮುನ್ಸಿ, ಜವಾಹರಲಾಲ ಮೊದಲಾದವರ ಭಾಷಣ ಪ್ರಕಟವಾಗುವಾಗ ''ಸಿಂಹಗರ್ಜನೆ, ''ವೀರಾವೇಷದ ಭಾಷಣ, ''ಸ್ಪಷ್ಟೋಕ್ತಿ'' ಎಂದು ಶಿರೋಲೇಖನ ಬರುತ್ತದೆ. ಅದೇ ಜಮ್ನಾದಾಸ ಮೆಹತಾ, ಡಾ| ಅಂಬೇಡ್ಕರ್, ಕೇಳ್ಕರ್, ಸರ್. ಸಿ. ಪಿ. ರಾಮಸ್ವಾಮಿ, ಸರ್ ಮಿರ್ಜಾ ಇಸ್ಮಾಯಿಲ್, ಮೊದಲಾದ ನೂರಾರು ಜನ ಹಿಂದೀ ಮುಖಂಡರ ಭಾಷಣಗಳು ಪ್ರಕಟವಾಗುವಾಗ ''ಅರಣ್ಯ ರೋದನ,, ''ತಲೆತಿರುಕತನ'', ''ನರಿಯಣ್ಣ ತಂತ್ರ'', ''ವಿಷಕಾರುವಿಕೆ'', ''ಫೂತ್ಕಾರ'' ಇತ್ಯಾದಿ ಶಿರೋನಾಮ ಕೊಡಲಾಗುತ್ತದೆ. ಈ ರೀತಿ ಪತ್ರಿಕಾ ಸಂಪಾದಕರು ಬರಿಯುತ್ತಿರುವುದರಲ್ಲಿ ಪಕ್ಷಪಾತವಿರಬಹುದೆ?''

ನಾಯಿ ಬೊಗಳುತ್ತದೆ, ಆನೆ ಘೀಳಿಡುತ್ತದೆ, ಕುದುರೆ ಕೆನೆಯುತ್ತದೆ, ಅಳಿಲು ಚಿವುಗುಟ್ಟುತ್ತದೆ ಸಿಂಹ ಗರ್ಜಿಸುತ್ತದೆ, ನರಿಯು ಹುಕ್ಕೋ ಹುಕ್ಕೋ ಎನ್ನುತ್ತದೆ, ತುಂಬಿ ಝೇಂಕರಿಸುತ್ತದೆ., ಕತ್ತೆ ಒದರುತ್ತದೆ, ಮಂಗ ಕಿರಿಚುತ್ತದೆ, ಬೆಕ್ಕು ''ಮಿಯಾಂವ್'' ಎನ್ನುತ್ತದೆ ಎಂಬುದನ್ನು ನೋಡುವಾಗ ಮತ್ತು ವೀಣೆಯನ್ನು ಮಿಡಿಯುವುದು, ಕೊಳಲನ್ನೂದುವುದು, ಡೋಲನ್ನು ಬಾರಿಸುವುದು, ಗೊರಕೆ ಹೊಡೆಯುವುದು, ಎಂದು ಮೊದಲಾಗಿ ಹೇಳುವುದನ್ನು ನೋಡುವಾಗ ನನಗೂ ತಮಾಷೆಯಾಗಿ ಕಂಡು ಬರುತ್ತದೆ.

ನರಿಗಳನ್ನು ನರಿಗಳಾಗಿಯೂ, ಸಿಂಹಗಳನ್ನು ಸಿಂಹಗಳಾಗಿಯೂ ಸೃಷ್ಟಿಮಾಡಿದ ದೇವರು ಅಥವಾ ಇನ್ನಾವ ಶಕ್ತಿಯು ಪಕ್ಷಪಾತದಿಂದ ಹಾಗೆ ಮಾಡಿರಬಹುದೋ ಎಂಬ ಸಂಶಯವು ನನ್ನಲ್ಲುಂಟಾಗುತ್ತಿದೆ.

೦ ೦ ೦

ಶ್ರೀ. ಭಾಗವತ ವೆಂಕಟೇಶ ಪೈ,
ಉಡುಪಿ.

''ಸ್ವಾಮಿ, ನನಗೆ ಬೇಸರವಾಗಿ ಕೆಲವು ಪ್ರಶ್ನೆಗಳನ್ನು ನಿಮಗೆ ಕಳುಹಿಸುತ್ತೇನೆ. ಇವುಗಳ ಉತ್ತರವನ್ನು ದಯವಿಟ್ಟು ತಿಳಿಸುವಿರಾ?''

ನಿಮಗೆ ಬೇಸರವಾಗಿ ಪ್ರಶ್ನೆ ಕೇಳಿದುದರಿಂದ ನನಗೆ ತುಂಬಾ ಸಂತೋಷವಾಗಿದೆ. ನಿಮ್ಮಂತೆಯೇ ಬೇಸರವಾದೊಡನೆ ಇತರರು ಕೂಡಾ ನನಗೆ ಬರೆದರೆ ಊರಿನಲ್ಲಿ ಹೊಡೆದಾಟಗಳು ಕಡಿಮೆಯಾಗಬಹುದು.

೦ ೦ ೦

''ಹೊಗೆಸೊಪ್ಪು ನಶ್ಯ''-- ನಶ್ಯವನ್ನು ಸೇವಿಸುವಾಗ ಅವನ ಕಣ್ಣು ಮುಖದಲ್ಲಿ ಆಗುವ ವಿಕಾರ ಇವನ್ನೆಲ್ಲಾ ನೋಡುವಾಗ ಅವನನ್ನು ಆದಷ್ಟು ದೂರದಲ್ಲಿ ಇರಿಸಬೇಕೆಂದು ಮನಸ್ಸಾಗುತ್ತದೆ. ''ನಶ್ಯ ಹಾಕುವ ಹೆಂಡಂದಿರ ಕಷ್ಟ ಹೇಳಿ ತೀರದು. ಇತರರಂತೆ ಅವರನ್ನು ದೂರ ವಿರಿಸಲಿಕ್ಕೆ ಅವರಿಗೆ ಸಾಧ್ಯವೇ? ಎಂದಿಡೆ. ಹಾಗಾದರೆ ನಶ್ಯ ಹಾಕುವವನ ಹೆಂಡತಿಯು

ಕಷ್ಟ ನನ್ನ ಗೆಳೆಯನಿಗೆ ತಿಳಿದ ಬಗೆ ಹೇಗೆ?''

"ಬೀಡಿ ಸಿಗರೇಟು ಸೇದುವವನ ಹೆಂಡತಿಯು ಎಷ್ಟು ಕಷ್ಟದಿಂದ ಸಹಿಸುತ್ತಿರುವಳೆಂದು ನಿನಗೆ ಗೊತ್ತಿದೆಯೇ?'' ಹಾಗಾದರೆ ಇದೂ ನನ್ನ ಗೆಳೆಯನಿಗೆ ತಿಳಿದ ಬಗೆ ಹೇಗೆ?

ನಿಮ್ಮ "ಗೆಳೆಯ" ನಿಗೆ ಅದು ಹೇಗೆ ಗೊತ್ತಾಯಿತೆಂದು ನಸ್ಯ ಹಾಕುವವರ ಹೆಂಡತಿಯರೊಡನೆ ಕೇಳಬೇಕು.

ಅದಂತಿರಲಿ. ನೀವು ಬೀಡಿ ಸಿಗರೇಟು ನಸ್ಯವನ್ನೆಳೆಯುವುದುಂಟೆ? ನಿಮ್ಮ "ಗೆಳೆಯ" ನು ಮೇಲಿನಂತೆ ಬರೆದಿರುವುದರಿಂದ ನಿಮಗೆ 'ಬೇಸರ' ವಾಗಿರಲಾರದಷ್ಟೆ?

"ಬೀಡಾ-ಬೀಡಿ— ನಮ್ಮ ಹಿಂದಿನವರು ಇದಕ್ಕೆ ಬೇಕಾದ ಸಾಹಿತ್ಯಗಳನ್ನು ಒಂದು ಚೀಲದಲ್ಲಿ ಹಾಕಿಕೊಂಡು ಹೋಗುತ್ತಿದ್ದರು. ಈಗಿನವರಿಗೆ ಆ ಕಷ್ಟವಿಲ್ಲ. ಬಸ್ ಸ್ಟೇಶನುಗಳಲ್ಲಿ, ಸಂತೆಗಳಲ್ಲಿ ಮನುಷ್ಯ ಜಾತಿಯನ್ನು ಕಂಡೊಡನೆ 'ಬೀಡಾ—ಬೀಡಾ, ಎಂದು ಓಡಿ ಬರುವ ಹುಡುಗರಿದ್ದಾರೆ'' ಎಂದಿದೆ. ಹೀಗಿರುವಲ್ಲಿ ಹಿಂದಿನವರ ಕ್ರಮ ಸರಿ ಎಂಬರ್ಥವಾಗುತ್ತದೆ. ಹಾಗಾದರೆ ಈಗಿನವರ ಕ್ರಮ ತಪ್ಪೇ?

ಎಲ್ಲಾ ತಪ್ಪು. ಮೊದಲಿನವರು ಚೀಲ ಹಿಡಿದುಕೊಂಡು ಹೋಗುತ್ತಿದ್ದುದು ಅವರ ತಪ್ಪು. ಈಗ ಚೀಲ ಹಿಡಿಯದೆ ಹೋಗಿ ಬೀಡ ತಿನ್ನುವುದು ಈಗಿನವರ ತಪ್ಪು. ವೀಳ್ಯ ತಿನ್ನುವುದೇ ತಪ್ಪೆಂದು ಲೇಖಕರು ಬರೆದುದನ್ನು ಅರ್ಥ ಮಾಡಿಕೊಳ್ಳದೆ ನೀವು ಮೇಲಿನಂತೆ ಬರೆದಿರುವುದು ನಿಮ್ಮ ತಪ್ಪು.

೦ ೦ ೦

'ಸಿಹಿ-ಕಹಿ'—ಯ ಎರಡನೆ ಪಾರಗಳಲ್ಲಿ 'ಜರ್ಮನಿಯ ಮುಸ್ಸೋಲಿನಿ ರೋಮನ್ನು ಸಂದರ್ಶಿಸಿ, ಇಟಲಿಯ ಹಿಟ್ಲರನಿಗೆ ಸಮರ್ಪಕವಾದ ಉತ್ತರವಿತ್ತನು' ಎಂದಿದೆ. ಯಾವಾಗ? ಎಲ್ಲಿ? ಆವರವರು ಸರ್ವಾಧಿಕ ರತ್ನವನ್ನು ಬದಲಾಯಿಸಿ ಕೊಂಡರು? ಅಥವಾ ಮುದ್ರಣಭೂತದ ಉಪದ್ರವವೋ?''

ನಿಮಗಿದರ ಅರ್ಥವೇ ಆಗಲಿಲ್ಲವೆಂದು ತೋರುತ್ತದೆ. ಹಿಟ್ಲರ್-ಮುಸ್ಸೋಲಿನಿಯರಿಬ್ಬರೂ ಸರ್ವಾಧಿಕಾರಿಗಳೆಂದು ನಿಮಗೆ ತಿಳಿದಿರಬಹುದು. ಇತ್ತೀಚೆಗೆ ಅವರಿಬ್ಬರೂ ಒಂದೇ ಧೋರಣೆಯನ್ನನುಸರಿಸಲಾರಂಭಿಸಿದ್ದಾರೆ. ಹಿಟ್ಲರನು ಜರ್ಮನಿಯಲ್ಲಿ 'ಅನಾರ್ಯ'ರೆಂಬ ನೆಲೆಯಿಂದ ಯೆಹೂದಿಯರನ್ನು ಹೊರಗೋಡಿಸುತ್ತಿರುವಾಗ, ಮುಸ್ಸೋಲಿನಿ ಕೂಡಾ ಇಟಲಿಯಿಂದ ಯೆಹೂದಿಯರನ್ನು ಹೊರಗೆ ಹಾಕುತ್ತಿದ್ದಾನೆ. ಹೀಗೆ ಯುರೋಪಿನ ಈ ಎರಡು ಸರ್ವಾಧಿಕಾರಿಗಳು ತಮ್ಮ ಧ್ಯೇಯ ಸಾಧನೆಗಾಗಿ ಒಂದು ತರದ ಅನ್ಯೋನ್ಯತೆಯಿಂದ ನಡೆದುಕೊಂಡು ಬರುವುದಲ್ಲದೆ ಒಬ್ಬನು ಹೇಳಿದಂತೆ ಇನ್ನೊಬ್ಬನು ವಿಧೇಯತೆಯಿಂದ ವರ್ತಿಸುತ್ತಾನೆ. ವಸ್ತುಸ್ಥಿತಿಯು ಹೀಗಿರುವಾಗ ಮುಸ್ಸೋಲಿನಿ ಹಿಟ್ಲರನ ಧೋರಣೆಗಳ ಪ್ರತಿರೂಪ,—ಹಿಟ್ಲರ್ ಮುಸ್ಸೋಲಿನಿಯ ಧೋರಣೆಗಳ ಪ್ರತಿರೂಪ ಎಂಬರ್ಥದಿಂದ— 'ಇಟಲಿಯ ಹಿಟ್ಲರ್', ಜರ್ಮನಿಯ ಮುಸ್ಸೋಲಿನಿ' ಎಂದು ವ್ಯಂಗ್ಯವಾಗಿ ಉಪಯೋಗಿಸಿರುವುದಲ್ಲದೆ ಆ ಪ್ರಯೋಗವು ಮುದ್ರಣಭೂತದ ಪರಿಣಾಮವಲ್ಲ.

ಸುಮಾರು ಮೂರು ತಿಂಗಳುಗಳ ಹಿಂದೆ ಹೆರ್ ಹಿಟ್ಲರನು ರೋಮನ್ನು ಸಂದರ್ಶಿಸಿರುವುದು ಪ್ರಾಯಶಃ ನಿಮಗೆ ತಿಳಿದಿರಬಹುದು.

೦ ೦ ೦

ಶ್ರೀ. ಕೆ. ಸೀತಾರಾಮು,
ಬೆಂಗಳೂರು.

'ಈ ವಾರದ ಪಂಚಿಕೆಯಲ್ಲಿ ರೈತರ ಸಲುವಾಗಿ ಉಡ್ಪಿ ಮತ್ತು ಮಂಗಳೂರಲ್ಲಿ ಅಡವಿಮಾನ ಬ್ಯಾಂಕನ್ನು ತೆರೆದಿರುವುದಾಗಿ ಬರೆದಿರುತ್ತೀರಿ? ಹಾಗಿದ್ದಲ್ಲಿ ಅದು ಸರಕಾರದಿಂದಲೇ ತೆರೆದಿರುವುದೆ? ಎಂಬುದನ್ನು ತಿಳಿಸಿರಿ. ಅಲ್ಲದೆ ಅದರ ಸಂಪೂರ್ಣ ವಿಳಾಸವನ್ನೂ ಸಹ ತಿಳಿಸಿರಿ. ಇದರಿಂದ ರೈತರಿಗೆ ಫಲಕಾರಿಯಾಗುವ ಸಂಭವ ಉಂಟೇ ಎಂಬ ನಿಮ್ಮ ಸ್ವಂತ ಅಭಿಪ್ರಾಯವನ್ನು ಬರೆಯಬೇಕಾಗಿ ಕೋರುತ್ತೇನೆ'

ಪ್ರಿಯ ಮಹಾಶಯರೆ, '**ಈ ವಾರದ ಹಂಚಿಕೆ**'ಯಲ್ಲಿ ನಾನು ಬರೆಯುವುದು ಹೇಗೆಂದು ನನಗರಿಯದು. ಉಡುಪಿ ಮತ್ತು ಮಂಗಳೂರಲ್ಲಿ '**ಅಡವಿಮಾನ**' ಬ್ಯಾಂಕನ್ನು ತೆರೆದಿರುವುದು ನನಗೆ ಸರ್ವಥಾ ಗೊತ್ತಿಲ್ಲ. ಈ ವಾರದಲ್ಲಿ ನಾನು ಯಾವ 'ಹಂಚಿಕೆ'ಯನ್ನೂ ಮಾಡಲಿಲ್ಲ. ಉಡುಪಿ ಮಂಗಳೂರುಗಳಿಗೆ 'ಅಡ-ವಿಮಾನ'ವೆಂಬ ಹೊಸ ವಿಮಾನವು ಯಾವಾಗ ಬಂತೆಂಬುದರ ಅರಿವು ನನಗಿಲ್ಲ. ಈ 'ಅಡ-ವಿಮಾನ'ವನ್ನು ಸರಕಾರವು ತೆರೆದ ಸುದ್ದಿಯೂ ನಾನು ಕೇಳಲಿಲ್ಲ. ಏನೂ ಗೊತ್ತಿಲ್ಲದಿರುವುದರಿಂದ ಅದರ ಸಂಪೂರ್ಣ ವಿಳಾಸವನ್ನು ನಿಮಗೆ ತಿಳಿಸಲು ನನಗೆ ಶಕ್ಯವಿಲ್ಲ.

ಈ 'ಅಡ ವಿಮಾನ' ವೆಂಬ ವಿಚಿತ್ರ ವಿಮಾನ ಬ್ಯಾಂಕಿನಿಂದ ರೈತರಿಗೆ ಯಾವ ಫಲಸಿಗುತ್ತದೆಂಬ ನನ್ನ ಸ್ವಂತ ಅಭಿಪ್ರಾಯವನ್ನು ನಾನು ಆ ವಿಮಾನವನ್ನು ನೋಡಿದ ಬಳಿಕ ಕೊಡಬಹುದಲ್ಲದೆ ಈಗ ನನ್ನಿಂದ ಸಾಧ್ಯವಿಲ್ಲ.

——(೦)——



ಗಾಂಧಿಯವರು ಮಹಾತ್ಮರೆಂದು ಮಾತ್ರ ನಮಗೆ ಗೊತ್ತು. ನಮಗೆ ಗೊತ್ತಿದ್ದಷ್ಟೇ ಮರಾಠೀ ಪತ್ರಿಕೆಗಳಿಗೆ ಗೊತ್ತಿರಬೇಕೆಂಬ ಕಾನೂನಿಲ್ಲ.

++ ++

ಮಹಾ ಆತ್ಮವು ಮಹಾ ಪಾಪಾತ್ಮವೋ ಮಹಾ ಪವಿತ್ರಾತ್ಮವೋ ಎಂಬ ಪ್ರಶ್ನೆ 'ಮಹಾತ್ಮ'ನನ್ನು ಕಂಡುಹಿಡಿದ ಮೇಲೆ ಹುಟ್ಟುವಂತಹದೇ!

++ ++ ++

'ದುರಾತ್ಮ' 'ಪಾಪಾತ್ಮ' ಎಂದು ಮರಾಠೀ ಪತ್ರಿಕೆಗಳು ಮಹಾತ್ಮನನ್ನು ಕರೆಯಲಾರಂಭಿಸಿವೆ!

++ ++ ++

ಯಾರೂ ಕಂಡುಹಿಡಿಯದ ಈ ಶೋಧನೆಯನ್ನು ಕಂಡುಹಿಡಿದ ಮರಾಠೀ ಪತ್ರಿಕೆಗಳ ಕಡೆಗೆ ತನ್ನಂತೆ ತಿರುಗಬೇಕಾಯಿತು 'ಮಹಾತ್ಮಾ' ಎಂಬ ಹೆಸರು!

++ ++ ++

ಆದರೆ ಇಲ್ಲಿ ತೊಂದರೆ ಕೊಡುತ್ತಾ ಮೂಲಪ್ರಶ್ನೆ ಮುಂದೆ ಬರುತ್ತದೆ. ಮರಾಠೀ ಪತ್ರಿಕೆಗಳ 'ಮಹಾ ಆತ್ಮ' ದುರಾತ್ಮವೋ ಪವಿತ್ರಾತ್ಮವೋ ಎಂಬ ಪ್ರಶ್ನೆ ಆಮೇಲೆ; ಅವಕ್ಕೆ ಮಹಾ ಆತ್ಮವಿರುವದು ನಿಜವೆ? ಎಂಬುದು ಸದ್ಯದ ಪ್ರಶ್ನೆ.

++ ++ ++

ಈ ಪ್ರಶ್ನೆ ಇನ್ನಷ್ಟು ಆಳಕ್ಕೆ ಇಳಿಯುತ್ತದಲ್ಲ! ಅವುಗಳ ಆತ್ಮವು ಅಲ್ಪವೋ ಮಹತ್ತೋ ಎಂಬುದರ ಬದಲಿಗೆ 'ಉಂಟೋ ಇಲ್ಲವೋ' ಎಂಬಲ್ಲಿಗೆ ಬರುತ್ತದಲ್ಲ!

++ ++ ++

ಇಷ್ಟು ಆಳವಾದ ಪ್ರಶ್ನೆಯೊಳಗೆ ಯಾವ ಪ್ರಯೋಜನವೂ ಇಲ್ಲದೆ ಯಾರೇಕೆ ಧುಮುಕಬೇಕು?

++ ++ ++

ವಾರ್ಧಾ ಆಶ್ರಮದ ಇಬ್ಬರು ಕೆಲಸಗಾರರು ಕೋಲೆರಾ ತಾಗಿ ಸತ್ತುದರಿಂದ ಗಾಂಧಿಯವರು ಮೌನವ್ರತ ಹಿಡಿದರಷ್ಟೆ! ಕೆಲಸಗಾರರು ಸತ್ತುದು ಕೊಲೆರಾ ತಾಗಿ; ಕಾಲೆರಾ ತಾಗಿದುದು ಏನು ತಾಗಿ?

++ ++ ++

ಇದೂ ಮೇಲಿನ ಪ್ರಶ್ನೆಯಂತಹ ಒಂದು ಪ್ರಶ್ನೆ. ಈ ಜಾತಿಯ ಪ್ರಶ್ನೆಗಳಿಗೆಲ್ಲಾ ಉತ್ತರ ಕೊಡಲು ಮಹಾರಾಷ್ಟ್ರದ ಪತ್ರಿಕೆಗಳಿಗೆ ಮಾತ್ರ ಗೊತ್ತು.

++ ++ ++

'ಅವರಿಗೆ ಕೊಲೆರಾ ತಾಗಿದುದು ಹೆಂಡ ಕುಡಿದು' ಎಂದು ಕೆಲವು ಪತ್ರಿಕೆಗಳು ಪ್ರಕಟಿಸಿದವು. ಅದರೊಡನೆ ಸಂಬಂಧವಿಟ್ಟುಕೊಂಡ ಒಂದು ಕತೆಯೂ ಹೊರಬಂತು.

++ ++ ++

ಬೊಂಬೇ ಕ್ರಾನಿಕಲ್ ಪತ್ರಿಕೆಯು ಸ್ವಂತ ಪ್ರತಿನಿಧಿಯನ್ನು ಕಳುಹಿಸಿ ವಿಚಾರಣೆ ನಡೆಸಿತು. 'ಮೇಲಿನ ವಾರ್ತೆಯು ಹಸೀ ಸುಳ್ಳು' ಎಂದು ಆಧಾರಕೊಟ್ಟು ಪ್ರಕಟಿಸಿತು. ಆದರೂ ನಮ್ಮ ಅನುಮಾನ ಹೋಗಿಲ್ಲ.

++ ++ ++

'ಬೆಂಕಿಯಿಲ್ಲದೆ ಹೊಗೆಯೇಳುವದಿಲ್ಲ; ಆಧಾರವಿಲ್ಲದೆ ವಾರ್ತೆ ಹಬ್ಬುವದಿಲ್ಲ' ಹೆಂಡ ಕುಡಿಯದೆ ಕುಡಿದ ವಾರ್ತೆ ಹೇಗೆ ಹುಟ್ಟಿತು?

++ ++ ++

ನಿಜ. ಅಮಲಿನಿಂದಲೇ ವಾರ್ತೆ ಹುಟ್ಟಿತು- ಎಂದು ನಾವು ನಂಬಬೇಕಾಗುವದು!

++ ++ ++

ಇತ್ತೀಚೆಗೆ ತಿರುವಾಂಕೂರು ಮೊದಲಾದ ಕಡೆಗಳಲ್ಲಿ ಸಣ್ಣ ಭೂಕಂಪವಾಯಿತು. ದಕ್ಷಿಣ ಹಿಂದುಸ್ಥಾನದಲ್ಲಿ ಈ ವರೆಗೆ ಹೀಗಾದುದಿಲ್ಲ! ಕಾಲಕ್ಕೇನು ಶನಿ ಹಿಡಿಯಿತು?

++ ++ ++

ಕಳೆದ ಬಾರಿ ಬಿಹಾರಿನಲ್ಲಿ ಭೂಕಂಪವಾದಾಗ 'ಇದು ಅಸ್ಪೃಶ್ಯತೆಯ ಪಾಪದ ಫಲ' ಎಂದು ಮಹಾತ್ಮಾ ಗಾಂಧಿಯವರು ಹೇಳಿದ್ದರು.

++ ++ ++

ಅಸ್ಪರ್ಶರು ಹತ್ತಿರ ಬಂದರೆ ಸನಾತನಿಗಳು ನಡುಗುತ್ತಾರೆ; ದೂರವಿಟ್ಟರೆ ಭೂತಾಯಿ ನಡುಗುತ್ತಾಳೆ-ಹೀಗಿದ್ದ ನಮ್ಮ ನಂಬಿಕೆಯು ತಿರುವಾಂಕೂರಿನ ಕಂಪದಿಂದ ಅಡಿಮೇಲಾಗಿ ಕುಸಿದು ಬಿತ್ತು, ಮತ್ತೇನೂ ಹಾನಿಯಾಗಿಲ್ಲ!

++ ++ ++

'ಧರ್ಮಕ್ಕೆ ಜಯವಾಗಲಿ!' ಎಂದು ಜೈಕಾರ ಹಾಕಲು ಸನಾತನಿಗಳೀಗ ಮುಂದೆ ಬರಬೇಕು. 'ಇದು ಅಸ್ಪರ್ಶತಾನಿವಾರಣೆಯು ಪಾಪದ ಫಲ' ಎಂದು ಅವರೇಕೆ ಹೇಳಬಾರದು?

—— ದೂವಿ.

# ಆಫೀಸಿನಲ್ಲಿ ಪ್ರಚಂಡ ಗಡಿಬಿಡಿ

## ಆಫೀಸ್ ಸೆಕ್ರೆಟೆರಿಯವರ ಪತ್ರವ್ಯವಹಾರ.

[ಆಫೀಸ್ ಮೆನೇಜರರಿಂದ ಆಫೀಸ್ ಸೆಕ್ರೆಟರಿಯರಿಗೆ ಪತ್ರ]

ಮೆನೇಜರರು ಯಾವಾಗ ನೋಡಿದರೂ ಮೇಜಿನ ಮೇಲೆ ಶಾಯಿ ಚೆಲ್ಲಿರುತ್ತದಂತೆ. ಬ್ಲಾಟಿಂಗ್ ಪೇಪರ್ ಎಷ್ಟಿದ್ದರೂ ಅದು ಜಗೆಯಲ್ಪಟ್ಟು ಮೇಜಿನ ಮೇಲಿರುತ್ತದಂತೆ. ಆಫೀಸ್ ಜವಾನನು ಗಯ್ಯಾಳಿಯಂತೆ. ನೀವು ಸರಿಯಾಗಿ ವ್ಯವಸ್ಥೆ ಮಾಡದಿದ್ದರೆ ನಿಮ್ಮ ಕುರಿತು ಆಲೋಚಿಸಲ್ಪಡುವುದು.

(ಸಹಿ) **ರಾಮೇಶ ಗಟ್ಟಿ.**
ಆಫೀಸ್ ಮೆನೇಜರ್.

[ಆಫೀಸ್ ಸೆಕ್ರೆಟರಿಯ ರಿಂದ ಆಫೀಸ್ ಮೆನೇಜರರಿಗೆ ಪತ್ರ]

ಸ್ವಾಮಿ, ಮೆನೇಜರರ ಅಸಂತೋಷಕ್ಕಾಗಿ ತುಂಬಾ ಬೇಸರಿಸುತ್ತೇನೆ. ಆಫೀಸ್ ಜವಾನನು ಹೊಸಬನಾದುದರಿಂದ ಗಾಳಿಯಿಂದಾಗಿ ಕಿಟಕಿ ಬಾಗಿಲು ಶಬ್ದ ಮಾಡಿದೊಡನೆಯೇ ಅವನು ಶಾಯಿ ದವತಿ ಚೆಲ್ಲಿಬಿಡುತ್ತಾನೆ. ಅವನು ಮೇಜಿನ ಮೇಲೆ ಪಾತ್ರೆಗಳನ್ನಿಡುತ್ತಿದ್ದವನು. ಬ್ಲಾಟಿಂಗ್ ಪೇಪರನ್ನು ಜಗಿಯುವುದು ಅವನ ದುರಭ್ಯಾಸವೆಂದು ವಿಚಾರಣೆಯಿಂದ ತಿಳಿದು ಬರುತ್ತದೆ. ಮೆನೇಜರರು ಅವನನ್ನು ಹೆದರಿಸಿದ ಬಳಿಕ ಭಯದಿಂದ ಅವನು ಇನ್ನಷ್ಟು ಬ್ಲಾಟಿಂಗ್ ಪೇಪರನ್ನು ಜಗಿಯಲಾರಂಭಿಸಿದ್ದಾನೆ.

**ದಿನಕರ ಶೆಟ್ಟಿ**
ಆಫೀಸ್ ಸೆಕ್ರೆಟರಿ.

[ಆಫೀಸ್ ಮೆನೇಜರರಿಂದ ಆಫೀಸ್ ಸೆಕ್ರೆಟರಿಯರಿಗೆ, ಎರಡು ದಿವಸಗಳ ಬಳಿಕ.]

ಈ ರೀತಿ ಜಗಿಯುವುದನ್ನು ನೀವು ಹೇಗಾದರೂ ನಿಲ್ಲಿಸಬೇಕಾಗಿದೆ. ಈ ದಿವಸ ಮೇಜಿನ ಮೇಲಿದ್ದ ಎಲ್ಲಾ ಲಕ್ಕೋಟೆ, ಸಂದರ್ಶಕರ ಪುಸ್ತಕ, ಮತ್ತು ಖಾಲಿ ಕಾಗದಗಳು ಸಂಪೂರ್ಣವಾಗಿ ಜಗಿಯಲ್ಪಟ್ಟವೆ. ಇದೆಂಥ ಅವಸ್ಥೆ? ಇದಕ್ಕೆ ಕಾರಣವೇನು?

[ಆ. ಕಾರ್ಯದರ್ಶಿಯರಿಂದ ಆ. ಮೆನೇಜರರಿಗೆ ಮೂರು ದಿವಸಗಳ ನಂತರ]

ಸ್ವಾಮಿ,

ಇಲಿ.

[ಆ. ಮೆನೇಜರರಿಂದ ಆ. ಸೆಕ್ರೆಟರಿಗೆ—ಅದೇ ಪತ್ರದ ಒಂದು ಬದಿಯಲ್ಲಿ]

ನೀವು ಏನು ಹೇಳುತ್ತಿದ್ದೀರಿ? ಇಲಿ—ಎಂಥ ಇಲಿ?

[ಆಫೀಸ್ ಕಾರ್ಯದರ್ಶಿಯರಿಂದ ಆಫೀಸ್ ಮೆನೇಜರರಿಗೆ]

ಸ್ವಾಮಿ,

ತಮ್ಮ ಕಳೆದ ವಾರದ ಪ್ರಶ್ನೆಗೆ ನಾನೀಗ ಉತ್ತರವೀಯುತ್ತಿದ್ದೇನೆ.



ಆಫೀಸ್ ಸೆಕ್ರೆಟೆರಿಯವರು.

ಮೇಜಿನ ಮೇಲಿರುವ ಕಾಗದ ಲಕ್ಕೋಟೆ ಮತ್ತು ಬ್ಲಾಟಿಂಗ್‌ಗಳನ್ನು ತಿನ್ನುವುದು ಇಲಿಗಳು. ನಿನ್ನೆ ಆಫೀಸ್ ಜವಾನನ ಇಜಾರನ್ನು ಕೂಡಾ ತಿಂದಿವೆ. (ಅವನ ಜೇಬಿನಲ್ಲಿ ಒಂದು ಬಿಸ್ಕೆಟು ಇದ್ದದ್ದೇ ಅದಕ್ಕೆ ಕಾರಣವಂತೆ)

[ಉತ್ತರ. ಕಾಗದದ ಬದಿಯಲ್ಲಿ]

ಎಲ್ಲಿಂದಾದರೂ ಒಂದು ಬೆಕ್ಕನ್ನು ತನ್ನಿರಿ ಮಹಾರಾಯಾ, ನಿಮಗೆ

ಸಹಾಯ ಬೇಕಿದ್ದರೆ ನಮ್ಮ ಕಾರಕೂನರೊಡನೆ ಹೇಳಿರಿ. ನನಗೆ ಉಪದ್ರವಿಸುತ್ತಿರಬೇಡಿ.



[ಆ. ಸೆಕ್ರೆಟರಿಯರಿಂದ ಕಾರಕೂನರಿಗೆ ಪತ್ರ]

ಸ್ವಾಮಿ,

ಆಫೀಸಿನ ಮೇಜಿನ ಮೇಲಿರುವ ಕಾಗದ, ಕವರು, ಬ್ಲಾಟಿಂಗ್ ಪೇಪರ್ ಮೊದಲಾದುವುಗಳನ್ನು ಇಲಿಗಳು ತಿನ್ನುವುದರಿಂದ ಒಂದು ಬೆಕ್ಕನ್ನು ತರಬೇಕೆಂದು ಆಫೀಸ್ ಮೆನೇಜರರು ನನಗೆ ತಿಳಿಸಿದ್ದಾರೆ. ಸಹಾಯ ಬೇಕಿದ್ದರೆ ಕಾರಕೂನರೊಡನೆ ಕೇಳಿರೆಂದು ಅವರು ಬರೆದಿದ್ದಾರೆ. ಈ ಕಾರ್ಯವನ್ನು ನಾನು ಹೇಗೆ ಸಾಧಿಸಬಹುದೆಂದು ದಯವಿಟ್ಟು ತಿಳಿಸಿರಿ.



[ಕಾರಕೂನರಿಂದ ಆಫೀಸ್ ಸೆಕ್ರೆಟರಿಯರಿಗೆ ಪತ್ರ]

ನಿಮಗೆ ಯಾವುದಾದರೊಂದು ಪ್ರಾಣಿಯು ಬೇಕಾಗಿದ್ದರೆ ಸಪ್ಲೈ ಡಿಪಾರ್ಟ್‌ಮೆಂಟಿನ ಮೆನೇಜರರಿಗೆ ಬರೆಯಬೇಕಲ್ಲದೆ ಕಾರಕೂನರಿಗೆ ಬರೆದು ಪ್ರಯೋಜನವಿಲ್ಲವೆಂದು ನಾನು ಈ ಮೂಲಕ ತಿಳಿಸಬೇಕಾಗಿದೆ



[ಆಫೀಸ್ ಸೆಕ್ರೆಟರಿಯರಿಂದ ಸಪ್ಲೈ ಡಿಪಾರ್ಟ್‌ಮೆಂಟಿನ ಮೆನೇಜರರಿಗೆ]

ನಮ್ಮ ಮೆನೇಜರ ಮೇಜಿನ ಮೇಲಿರುವ ಕಾಗದ, ಕವರು ಮತ್ತು ಬ್ಲಾಟಿಂಗ್ ಪೇಪರುಗಳನ್ನು ಇಲಿಗಳು ತಿನ್ನುವುದರಿಂದ ಕಾರಕೂನರ ಸಹಾಯದಿಂದ ಒಂದು ಬೆಕ್ಕನ್ನು ತರಬೇಕೆಂದು ಆಫೀಸ್ ಮೆನೇಜರರು ತಿಳಿಸಿದಂತೆ ಕಾರಕೂನರಿಗೆ ನಾನು ಬರೆಯಲು ಅವರು ಸಪ್ಲೈ ಡಿಪಾರ್ಟ್‌ಮೆಂಟಿಗೆ ಬರೆಯಬೇಕೆಂದು ತಿಳಿಸಿರುವರು. ದಯವಿಟ್ಟು ಇಲಿ ಹೆಗ್ಗಣ ಹಿಡಿಯುವ ಒಂದು ಬೆಕ್ಕನ್ನು ಒದಗಿಸುವ ಏರ್ಪಾಡು ಮಾಡಿರಿ.



[ಸಪ್ಲೈ ಮೆನೇಜರರಿಂದ ಆಫೀಸ್ ಸೆಕ್ರೆಟರಿಯರಿಗೆ]

ನಿಮ್ಮ ಇಂಡೆಂಟ್ ತಲಪಿತು. ಈ ಪತ್ರದೊಡನೆ ಒಂದು ಇಲಿ, ಹೆಗ್ಗಣ, ಮತ್ತು ಎರಡು ಬೆಕ್ಕುಗಳನ್ನು ಕಳುಹಿಸಿರುತ್ತೇನೆ. ದಯವಿಟ್ಟು ರಶೀದಿ ಕಳುಹಿಸಿರಿ.



[ಆಫೀಸ್ ಸೆಕ್ರೆಟರಿಯರಿಂದ ಸಪ್ಲೈ ಮೆನೇಜರರಿಗೆ-ಮೂರು ದಿವಸಗಳ ಬಳಿಕ]

ಈ ಬೆಕ್ಕನ್ನು ಪೋಷಿಸುವುದು ಹೇಗೆಂದು ನನಗರಿತಿಲ್ಲ. ಬಹಳ ಕೊಬ್ಬಿದ ಬೆಕ್ಕಾದುದರಿಂದ ಅದಕ್ಕೆ ತುಂಬಾ ಹಾಲು ಬೇಕೆಂದು ಕಾಣುತ್ತದೆ. ಮೀನು ಕೊಟ್ಟರೆ ಅದು ಸಂತೋಷದಿಂದ ನುಂಗಿ ಬಿಡುತ್ತದೆ.



[ಸಪ್ಲೈ ಮೆನೇಜರರಿಂದ ಆಫೀಸ್ ಸೆಕ್ರೆಟರಿಯರಿಗೆ]

ಬೆಕ್ಕುಗಳಿಗೆ ಎಂದೂ ಹಾಲು ಕೊಡಬಾರದು. ಮೀನು ಕೊಡುವುದು ಮಹಾ ತಪ್ಪು. ಅದು ಇಲಿಗಳನ್ನು ಮಾತ್ರ ತಿಂದು ಜೀವಿಸಬೇಕು.



[ಆಫೀಸ್ ಸೆಕ್ರೆಟರಿಯರಿಂದ ಸಪ್ಲೈ ಮೆನೇಜರರಿಗೆ]

ನಿಮ್ಮ ಪತ್ರ ತಲಪಿತು. ಬೆಕ್ಕಿಗೆ ಇಲಿಯಲ್ಲದೆ ಮತ್ತೇನನ್ನೂ ನಾನು ತಿನ್ನಬಿಡುವುದಿಲ್ಲ.

ಪಿ. ಸೂ:- ಆ ಬೆಕ್ಕಿಗೆ ನಾನು ಮೀನು ಕೊಡುವುದಿಲ್ಲ. ನಮ್ಮ ಆಫೀಸ್ ಮೆನೇಜರರಲ್ಲಿಗೆ ಅದು ಮೊನ್ನೆ ಹೋಗಿತ್ತು. ನಾನೂ ಹೋಗಿದ್ದೆ. ನಾವಿಬ್ಬರೂ ಊಟ ಮಾಡುವಾಗ ಅದು ಮೇಲೋಗರದ ಬಟ್ಟಲಿನಿಂದ ಮೀನಿನ ತುಂಡನ್ನು ಎಳೆದು ಬಿಟ್ಟಿತು. ಆಗ ಮೆನೇಜರರಿಗೆ ಕೋಪಬಂದು ಅದಕ್ಕೆ ಹೊಡೆಯಲು ಹೋದಾಗ ಅದು ಜಾರಿಬಿಟ್ಟಿತು. ಅದರಿಂದ ನಮ್ಮ ಆಫೀಸ್ ಮೆನೇಜರರಿಗೆ ಪ್ರಾಣಿಗಳ ಮೇಲೆ ದಯೆಯಿಲ್ಲವೆಂದು ನನಗರಿಯಿತು



[ಸಪ್ಲೈ ಮೆನೇಜರರಿಂದ ಆಫೀಸ್ ಸೆಕ್ರೆಟರಿಯರಿಗೆ]

ಬೆಕ್ಕು ಮೀನು ತಿನ್ನಲಾರಂಭಿಸಿದರೆ ಇಲಿ ಹಿಡಿಯುವುದಿಲ್ಲವೆಂದು ಹೇಳಲು ನನಗೆ ಮರೆತು ಹೋಯಿತು. ಹೀಗೆ ಪ್ರಾಣಿಶಾಸ್ತ್ರ (ಬರೆದವರು: ಹುಚ್ಚಪ್ಪ ಗುದಿಗೆಪ್ಪ)ದ ೯೬ನೆಯ ಪುಟದಲ್ಲಿ ಬರೆಯಲ್ಪಟ್ಟಿದೆ. ನಮ್ಮ ಬೆಕ್ಕು ಎಷ್ಟು ಇಲಿಗಳನ್ನು ಹಿಡಿದಿರುತ್ತದೆಯೆಂಬ ಸ್ಟೇಟ್‌ಮೆಂಟನ್ನು ಬೇಗನೆ ಕಳುಹಿಸಿರಿ.



[ಆಫೀಸ್ ಸೆಕ್ರೆಟರಿಯರಿಂದ ಸಪ್ಲೈ ಮೆನೇಜರರಿಗೆ]

ನಮ್ಮೊಡನೆ ಎರಡೇ ಇಲಿಗಳಿವೆ. ನನ್ನ ಮನೆಯಲ್ಲಿ ಅಡಿಗೆಯವನು ಕದ್ದು ಹಾಲು ಕುಡಿಯುತ್ತಿದ್ದಾಗ ಮೂಲೆಯಲ್ಲಿ ಇಲಿಯೊಂದನ್ನು ಕಂಡು ಅದನ್ನು ಹಿಡಿದನಂತೆ. ಹೀಗೆ ಒಂದು ಇಲಿ ಬೆಕ್ಕಿನಿಂದ ಹಿಡಿಯಲ್ಪಟ್ಟಿದೆ. ಮತ್ತೊಂದು

೨೧ನೇ ಪುಟನೋಡಿರಿ.




**ಸತ್ಯಾತ್ಮ!**

"ಶೆಣೈ, ನಿನಗೊಂದು ರೂಪಾಯಿ ಸಿಕ್ಕಿದರೆ ನೀನದನ್ನು ಇಟ್ಟುಕೊಳ್ಳುವೆಯಾ?" ಎಂದು ಕೇಳಿದರು ಉಪಾಧ್ಯಾಯರು.

"ಇಲ್ಲ ಸಾರ್" ಎಂದು ವಾಸುದೇವ ಶೆಣೈಯ ಉತ್ತರ.

"ನೀನು ಒಳ್ಳೆ ಹುಡುಗ" ಎಂದು ಹೊಗಳಿ ಕೇಳಿದರು ಉಪಾಧ್ಯಾಯರು-"ಮತ್ತೇನು ಮಾಡುವಿ, ಶೆಣೈ?"

"ನಾನದನ್ನು ಖರ್ಚು ಮಾಡಿಯೇನು, ಸಾರ್" ಎಂದು ವಾಸುದೇವನ ಉತ್ತರ!



"ನೀನು ನಿಮ್ಮ ಮೇನೇಜರರು ಎಳೆಯುವ ಸಿಗರೇಟನ್ನೇ ಎಳೆಯುತ್ತಿ!"

"ಹೌದು. ಅರ್ಧಾಂಶ ಅವರೆಳೆಯುತ್ತಾರೆ. ಇನ್ನೊಂದು ಅರ್ಧ ನಾನೆಳೆಯುತ್ತೇನೆ."

---

೨೦ನೇ ಪುಟದಿಂದ.

ನಮ್ಮ ಅಡಿಗೆಯವನು ಹಿಡಿದದ್ದು.

**ವಿ. ಸೂ:** -ನೀವು ಕಳುಹಿಸಿದ ಬೆಕ್ಕು ಭಾರಿ ಪೋಕ್ರಿ. ನನ್ನ ಮನೆಯಲ್ಲಿದ್ದ ಬೇಯಿಸಿದ ಮೊಟ್ಟೆಯನ್ನು ಅದು ತಿಂದು ಬಿಟ್ಟಿದೆ



[ಆಫೀಸ್ ಸೆಕ್ರೇಟರಿಯಿಂದ ಸಪ್ಲೈ ಮೆನೇಜರರಿಗೆ]

ಇನ್ನು ಬೆಕ್ಕಿನ ಕುರಿತು ದಯವಿಟ್ಟು ಪತ್ರ ಬರೆಯಬೇಡಿ. ನಮ್ಮ ಮೆನೇಜರರು ಪತ್ರವ್ಯವಹಾರದ ಫೈಲನ್ನು ನೋಡಿ ಹೀಗೆ ಮಾಡಿದರೆ ನನ್ನನ್ನು ಡಿಸ್‌ಮಿಸ್ ಮಾಡುತ್ತೇನೆಂದು ಹೇಳಿದ್ದಾರೆ.



[ಸಪ್ಲೈ ಮೆನೇಜರರಿಂದ ಆಫೀಸ್ ಸೆಕ್ರೆಟರಿಯರಿಗೆ]

ನೀವೂ ಬರೆಯಬೇಡಿ. ಇಲ್ಲಿಯ ಫೈಲನ್ನೂ ಮೆನೇಜರರು ನೋಡಿ ಹಾಗೆಯೇ ಹೇಳಿದ್ದಾರೆ.



## ಸ್ವೀಕಾರ

**ಜಯಂತಿ:** 1/4 ಡೆಮಿ ಸೈಜಿನ ಉತ್ತಮ ತರದ ಧಾರವಾಡ ಮಾಸಪತ್ರಿಕೆ.

**ಲೋಕಮಿತ್ರ:** ಧಾರವಾಡದ ವಾರಪತ್ರಿಕೆ.

**ಆಧುನಿಕ ಭಾರತ:** ರಾಣೆಬೆನ್ನೂರಿನ ಸಾಮ್ಯವಾದಿ ಪಕ್ಷ ಪತ್ರಿಕೆ-

**ಕರ್ನಾಟಕಬಂಧು:** ಗದಗದಿಂದ ಹೊರಡುವ ವಾರಪತ್ರಿಕೆ.

---

## ಕಾಂಗ್ರೆಸ್ ಸದಸ್ಯ ಸಪ್ತಾಹ

**ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ ಬಿನ್ನಹ**

೩೫ಕೋಟಿ ಜನಸಂಖ್ಯೆಯುಳ್ಳ ಹಿಂದುಸ್ಥಾನದಲ್ಲಿ ೧೯೩೬ನೇ ಇಸವಿಯಲ್ಲಿ ಕೇವಲ ೬,೩೬,೧೯೧ ಕಾಂಗ್ರೆಸ್ ಸದಸ್ಯರು ಮಾತ್ರವಾಗಿದ್ದು, ಅಧಿಕಾರ ಸ್ವೀಕಾರದ ಪರಿಣಾಮವಾಗಿ ೧೯೩೮ರಲ್ಲಿ ಆ ಸಂಖ್ಯೆಯು ಐದುಪಾಲು ಹೆಚ್ಚಿತು. ಆದರೆ ಇದು ಜನಸಂಖ್ಯೆಯ ೧೦೦ಕ್ಕೆ ಒಬ್ಬನಂತಾದರೂ ಆಗುವದಿಲ್ಲ. ಈ ವರ್ಷ ಇಮ್ಮಡಿ ಹುರುಪಿನಿಂದ ಕೆಲಸಮಾಡಬೇಕಾಗಿದೆ. ನಾವು ೩ಲಕ್ಷ ಮೆಂಬರರ ಪುಸ್ತಕಗಳನ್ನು ಅಖಿಲ ಕರ್ನಾಟಕಕ್ಕೆ ಹಂಚಿದ್ದೇವೆ. ಯಾವ ಕಾಂಗ್ರೆಸ್ ಕಮಿಟಿಯೂ ನಮಗೆ ವರದಿ ಕಳುಹಿಸಿಲ್ಲ. ಎಲ್ಲರೂ ಚುನಾವಣೆಯ ಗೊಂದಲದಲ್ಲೇ ಮಗ್ನರಾದಂತೆ ಕಾಣುತ್ತದೆ. ಮೆಂಬರನ್ನು ಸೇರಿಸಲು ಇನ್ನುಳಿದುದು ಇಪ್ಪತ್ತೇ ದಿವಸ. ಆದ್ದರಿಂದ ತಾ ೧೮-೯-೩೮ ರಿಂದ ೨೫-೯-೩೮ರ ವರೆಗಿನ ಒಂದು ವಾರವನ್ನು ಕಾಂಗ್ರೆಸ್ ಸದಸ್ಯ ಸಪ್ತಾಹವನ್ನಾಗಿ ಆಚರಿಸಿ, ಈ ಅವಧಿಯಲ್ಲಿ ಅಹೋರಾತ್ರಿ ಕಾಂಗ್ರೆಸ್ ಪ್ರಾಥಮಿಕ ಮೆಂಬರರನ್ನು ಸೇರಿಸುವ ಕೆಲಸವನ್ನು ಹುರುಪಿನಿಂದ ಸಾಗಿಸಬೇಕೆಂದು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪ್ರ. ಕಾರ್ಯದರ್ಶಿ ಶ್ರೀ ಗುದ್ಲೆಪ್ಪ ಹಳ್ಳಿಕೇರಿಯವರು ವಿನಂತಿಸುತ್ತಾರೆ.

# ಅಂತರಂಗದ ಸುದ್ದಿಗಳು

ಅಂತರಂಗದ ವಿಶೇಷ ಪ್ರತಿನಿಧಿಯ ಗುಟ್ಟಿನ ಡೈರಿಯ ಪೂರ್ಣ ನಿರಾಧಾರವಾದ ಸುದ್ದಿಗಳು. ಓದಿ ಗಡಿಬಿಡಿ ಮಾಡಿದರೆ ಯಾರೂ ಜವಾಬ್ದಾರರಲ್ಲ

### ಬಂಗಾಳದಲ್ಲಿ ಬದಲಾವಣೆ.

ಬಂಗಾಳದ ಮಂತ್ರಿಮಂಡಲದವರು ಸದ್ಯದಲ್ಲಿಯೇ ರಾಜಿನಾಮೆ ಯೀಯುವರು. ಮುಂದೆ ನಡೆಯುವ ಮಹಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವು ಜಯಹೊಂದಿ ಶ್ರೀ ಶರತ್ ಚಂದ್ರ ಬೋಸರು ಬಂಗಾಳದ ಪ್ರಥಮ ಕಾಂಗ್ರೆಸ್ ಪ್ರಧಾನರಾಗಿ ಆರಿಸಲ್ಪಡುವರು.

❖

### ಮಹಾಸುದ್ದಿ

ಕರ್ನಾಟಕದ ಸಮತಾವಾದಿ ಪಕ್ಷಕ್ಕೆ ಎಲ್ಲಾ ಧನಿಕರು ಸದಸ್ಯರಾಗಿ ಸೇರುವರೆಂದು ತಿಳಿಯಲಾಗಿದೆ. ಈ ಬಗ್ಗೆ ಪ್ರಚಾರಕ್ಕಾಗಿ ಕರ್ನಾಟಕದ ಎಲ್ಲಾ ಪತ್ರಿಕೆಗಳನ್ನು ಕೊಂಡುಕೊಳ್ಳುವ ಏರ್ಪಾಡಾಗುತ್ತಿದೆಯಂತೆ. ದಕ್ಷಿಣ ಕನ್ನಡದಲ್ಲಿ ಈಗಾಗಲೇ ಅನೇಕ ಪತ್ರಿಕೆಗಳನ್ನು ಕೊಂಡು ಕೋಡಿರುವರೆಂದು ಸ್ಪಷ್ಟವಾಗಿ ತಿಳಿದು ಬಂದಿದೆಯಂತೆ.

❖

### ಮೈಸೂರಿನಲ್ಲಿ ಸುಧಾರಣೆ

ಮೈಸೂರು ಲೆಜಿಸ್ಲೇಟಿವ್ ಕೌನ್ಸಿಲಿನಲ್ಲಿ ಹೊಸ ಪ್ರೆಸ್ ಮಸೂದೆಯು ಸರಕಾರದಿಂದ ಹಿಂತೆಗೆಯಲ್ಪಡುವುದೆಂದು ತಿಳಿಯಲಾಗಿದೆಯಂತೆ. ಸರಕಾರವು ಸದ್ಯದಲ್ಲಿಯೇ ಪ್ರಜಾಪ್ರತಿನಿಧಿ ಸಭೆಯೊಂದನ್ನು ಕರೆದು ಜವಾಬ್ದಾರೀ ಸರಕಾರವನ್ನು ಕೊಡಲೊಪ್ಪುವುದೆಂದು ಸುದ್ದಿಯು ಬಹಳವಾಗಿ ಹಬ್ಬಿರುವುದಂತೆ.

❖

### ತಿರುವಾಂಕೂರಿಗೆ ಬೆಂಬಲ

ತಿರುವಾಂಕೂರು ಸಂಸ್ಥಾನ ಕಾಂಗ್ರೆಸಿನವರ ಸತ್ಯಾಗ್ರಹಕ್ಕೆ ಕಾಂಗ್ರೆಸು ಪ್ರತ್ಯಕ್ಷ ಬೆಂಬಲವನ್ನೀಯಬೇಕೆಂದೂ ಅದಕ್ಕಾಗಿ ಎಲ್ಲಾ ಪ್ರಾಂತ್ಯಗಳಿಂದ ಸಾಧ್ಯವಾದಷ್ಟು ಸ್ವಯಂಸೇವಕರನ್ನು ಕಳುಹಿಸಬೇಕೆಂದೂ ಢಿಲ್ಲಿಯಲ್ಲಿ ಸೇರಲಿರುವ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಸಭೆಯಲ್ಲಿ ನಿರ್ಣಯವಾಗುವುದಂತೆ.

❖

### ಜಾತೀಯತೆಯ ನಿರ್ನಾಮ

ಮಂಗಳೂರು ಮತ್ತು ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯ ಸದಸ್ಯರು ಜಾತೀಯ ಭಾವನೆಯನ್ನು ಸಮೂಲವಾಗಿ ಹೋಗಲಾಡಿಸುವುದಕ್ಕಾಗಿ, ಬೆಳಗಾವಿಯಲ್ಲಿ ಇತ್ತೀಚೆಗೆ ಹಲವು ಕಾಂಗ್ರೆಸ್ ಕೆಲಸಗಾರರು ಪ್ರತಿಜ್ಞೆಮಾಡಿದಂತೆ ಇಲ್ಲಿಯೂ ಸಭೆ ಸೇರಿ ನಿರ್ಧಾರಗಳನ್ನು ಮಾಡುವರಂತೆ.

❖

### ಪೆಲೆಸ್ಟೈನಿನಲ್ಲಿ ಹಿಟ್ಲರ್

ಹೆರ್ ಹಿಟ್ಲರನು ಪೆಲೆಸ್ಟೈನಿನ ಅರಬರಿಗೆ ಪ್ರತ್ಯಕ್ಷವಾಗಿ ಬೆಂಬಲವೀಯುವನೆಂದೂ, ಜರ್ಮನ್ ಮತ್ತು ಇಂಗ್ಲಿಷ್ ಸೈನ್ಯಕ್ಕೆ ಪೆಲೆಸ್ಟೈನಿನಲ್ಲಿ ಯುದ್ಧವು ಸದ್ಯದಲ್ಲಿಯೇ ಪ್ರಾರಂಭವಾಗುವುದೆಂದೂ ತಿಳಿಯಲಾಗಿದೆ.

❖

### ಭಾರತೀಯರಿಗೆ ಗೇಸ್ ಮಾಸ್ಕ್

ಸದ್ಯದಲ್ಲಿಯೇ ಮಹಾಯುದ್ಧವಾಗುವ ಸಂಭವವಿರುವುದರಿಂದ ಮತ್ತು ಆ ಯುದ್ಧದಲ್ಲಿ ಜಪಾನು, ಜರ್ಮನಿ ಮತ್ತು ಇಟೆಲಿಗಳೊಡನೆ ಸಹಕರಿಸುವುದರಿಂದ ಇಂಡಿಯಾ ಸರಕಾರವು ವಿಷಗಾಳಿಯಿಂದ ರಕ್ಷಿಸಿಕೊಳ್ಳುವರೆ ಭಾರತೀಯರಿಗೆ ೩೮ ಕೋಟಿ ಮುಖವಾಡ(Gas mask) ಗಳನ್ನು ಹಂಚುವುದೆಂದು ತಿಳಿದು ಬರಲಾರಭಿಸಿದೆಯಂತೆ.

❖

### ಸರಹದ್ ಮಂತ್ರಿಮಂಡಲದ ಬಿಕ್ಕಟ್ಟು

ಗಡಿನಾಡಿನ ಕಾಂಗ್ರೆಸ್ ಮಂತ್ರಿಮಂಡಲದೊಡನೆ ಅಲ್ಲಿಯ ಅಧಿಕಾರಿಗಳು ಸಹಕರಿಸದಿರುವುದರಿಂದ ಸದ್ಯದಲ್ಲಿಯೇ ಗವರ್ನರರಿಗೂ ಕಾಂಗ್ರೆಸ್ ಮಂತ್ರಿಮಂಡಲಕ್ಕೂ ಅಭಿಪ್ರಾಯ ವ್ಯತ್ಯಾಸವುಂಟಾಗಿ ಬಿಕ್ಕಟ್ಟು ತಲೆದೋರುವದೆಂದು ತಿಳಿದು ಬರಲಾರಂಭಿಸಿದೆಯಂತೆ.

---

# ಲೋಕ ಮಹಾಯುದ್ಧದ ಕಾರ್ಮೋಡಗಳ ಸುಳಿವು!

## ರಷ್ಯವು ಯುದ್ಧಕ್ಕೆ ಸಿದ್ಧವಾಯಿತು.

## ಬ್ರಿಟನಿನ "ಶಾಂತಿಯತ್ನ"ವು ನಿಷ್ಫಲವಾಗುವುದೆ?

### ಗ್ರೀಗಳರ ಪುನರಾವರ್ತನೆ

ಶಾಂತಿಯ ಕೊರಳಿನ ಮೇಲೆ ಯುದ್ಧದ ಕರಾಳಕತ್ತಿಯು ಏಕ ಮಾತ್ರ ಕೂದಲಿನಿಂದ ಕಟ್ಟಲ್ಪಟ್ಟಿದೆ. ಒಂದರ ಬಳಿಕೊಂದರಂತೆ ಕಾಣಿಸಿಕೊಳ್ಳಲಾರಂಭಿಸಿವೆ!



ಯವನಾಗಿದ್ದೇನೆಂದು ಹಿಟ್ಲರನ್ ಪ್ರಜಾಸತ್ತಾತ್ಮಕ ರಾಷ್ಟ್ರಗಳಿಗೆ ಸಾರಿದನು. ಅವನ ಹೇಳಿಕೆಯು ಕಾರ್ಯರೂಪದಲ್ಲಿ ಭಾಷಾಂತರಿಸ

"ರೈಖ್ ರಾಜ್ಯದ ಕಿರಿಯ ಹಿಟ್ಲರ್"




ಜರ್ಮನಿಯು ಜೆಕೊಸ್ಲೋವೇಕಿಯವನ್ನು ಒಂದು ಸಾಧನವನ್ನಾಗಿ ಉಪಯೋಗಿಸುತ್ತಿದೆಯೆಂದು ರಷ್ಯದ ಪತ್ರಿಕೆಯೊಂದರಲ್ಲಿ ಪ್ರಕಟವಾದ ಈ ವ್ಯಂಗ್ಯ ಚಿತ್ರವು ಹೇಳುತ್ತಿದೆ.

**ಅದು ಎಂದು ತುಂಡಾಗಿ ಕೊರಳು ಕಡಿಯಲ್ಪಡುವುದೆಂದು ಹೇಳಲಾಗುವುದಿಲ್ಲ.** ಗ್ರೀಗಳರ ಚಿಹ್ನೆಗಳು

### ಹಿಟ್ಲರನ ಹೇಳಿಕೆ

ಸುಡೇಟನ್ ಜರ್ಮನರ ವಿಚಾರದಲ್ಲಿ ತಾನು ಕಠಿನ ಮನೋವೃತ್ತಿ

ಲ್ಪಟ್ಟಿದೆಯೆಂದು ಸುಡೆಟನ್ ಜರ್ಮನರು ಹಲವು ಜೆಕ್ ಪ್ರಾಂತ್ಯಗಳಲ್ಲಿ ದಂಗೆಯೆದ್ದು "ನಮಗೆ ಚುನಾವಣೆ

ಬೇಕೆ"ಂದು ಹೇಳಿರುವುದರಿಂದ ಸ್ಪಷ್ಟವಾಗುತ್ತದೆ.



**ಅಂತಃಕಲಹ**

ಜೆಕೊಸ್ಲೊವೇಕಿಯದಲ್ಲಿ ಅಂತಃಕಲಹವು ಪ್ರಾರಂಭವಾಗಿದೆ. ಚುನಾವಣೆಯ ಬೇಡಿಕೆಯು ಜೆಕ್ ಸರಕಾರದಿಂದ ಮನ್ನಿಸಲ್ಪಡದಿದ್ದರೆ ಹಿಟ್ಲರನು ಸುಡೇಟನರಿಗೆ ಪೂರ್ಣ ಬೆಂಬಲವನ್ನೀಯಲೊಪ್ಪಿದ್ದಾನೆ.



**ಲಜ್ಜಾವಹ ಸೂಚನೆ**

ಜೆಕ್ ಸರಕಾರವು ಸುಡೇಟನ್ ಪ್ರಾಂತ್ಯವನ್ನು ಸುಡೇಟನರಿಗೆ ಅರ್ಥಾತ್ ಹಿಟ್ಲರನಿಗೆ ಕೊಡಬಹುದೆಂದು ಬ್ರಿಟಿಷ್ ಸರಕಾರದ ಮಾಧ್ಯಮವಾದ ಟ್ಯಾಮ್ಸ್ ಪತ್ರಿಕೆಯು ಸೂಚಿಸಿದ್ದಕ್ಕೆ ಎಲ್ಲೆಡೆಗಳಿಂದಲೂ ಅಸಮ್ಮತಿಯು ವ್ಯಕ್ತಪಡಿಸಲ್ಪಟ್ಟಿದೆ. ಹೀಗೆ ಮಾಡುವುದರಿಂದ ಜೆಕ್ ರಾಷ್ಟ್ರವನ್ನು ಜರ್ಮನಿಗೆ ಮಾರಿದಂತಾಗುತ್ತದೆಂಬುದರಲ್ಲಿ ನಿರ್ವಿವಾದ.



**ಅಭಿಪ್ರಾಯ ವ್ಯತ್ಯಾಸ**

ಜೆಕೊಸ್ಲೊವೇಕಿಯ ಮತ್ತು ಫ್ರಾನ್ಸುಗಳು ಏಕಾಭಿಪ್ರಾಯದಲ್ಲಿದ್ದರೂ, ಬ್ರಿಟನ್ ಮತ್ತು ಇವೆರಡು ರಾಷ್ಟ್ರಗಳಿಗೆ ಅಭಿಪ್ರಾಯ ವ್ಯತ್ಯಾಸವುಂಟಾಗಲಾರಂಭಿಸಿದೆ. ಡಾ| ಬೆನೆಷ್ ಮತ್ತು ಲಾರ್ಡ್ ರನ್ಸಿಮನರ ಒಪ್ಪಿಗೆಯಲ್ಲಿ ಯಾವ ಬದಲಾವಣೆಯೂ ಆಗಬಾರದೆಂದು ಫ್ರಾನ್ಸ್ ಮತ್ತು ಜೆಕ್ ರಾಷ್ಟ್ರಗಳ ಅಭಿಪ್ರಾಯ.



**ಮುಂದೇನು?**

ಮುಂದೆ ಜರಗಬಹುದಾದ ರಾಷ್ಟ್ರಗಳ ಸಭೆಯಲ್ಲಿ ಜರ್ಮನಿಗೆ ಹಿತವಾಗಿರುವ ಸೂಚನೆಗಳು ಮುಂದೆ ತರಲ್ಪಡುವುದಲ್ಲದೆ ಜೆಕೊಸ್ಲೊವೇಕಿಯವು ಅದನ್ನೊಪ್ಪಿಕೊಳ್ಳುವಂತೆ ಮಾಡಲು ಯತ್ನಗಳಾಗುವವು. ಸುಡೇಟನ್ ಪ್ರಾಂತ್ಯವು ಫಲವತ್ತಾಗಿರುವುದರಿಂದ ಜೆಕೊಸ್ಲೊವೇಕಿಯದಿಂದ ಅದನ್ನು ಬೇರ್ಪಡಿಸಿದರೆ ಮುಂದೆ ಜೆಕ್ ರಾಷ್ಟ್ರವು ಆರ್ಥಿಕ ದೃಷ್ಟಿಯಲ್ಲಿ ಬಲಶೂನ್ಯವಾಗುವುದು.



**ಜೆಕೊಸ್ಲೊವೇಕಿಯದಲ್ಲಿ ರಾಷ್ಟ್ರಗಳ ಅಭಿರುಚಿ**

ಜರ್ಮನರು ಪೂರ್ವಭಾಗಕ್ಕೆ ಬರದಂತೆ ಜೆಕ್ಕರಿಗೆ ಸುಡೇಟನ್ ಪ್ರಾಂತ್ಯವು ಕೊಡಲ್ಪಟ್ಟಿತು. ಸುಡೇಟನ್ ವಿಭಾಗದಲ್ಲಿರುವವರು ಜರ್ಮನರು. ಅವರಿಗೆ ಆ ಪ್ರಾಂತ್ಯವನ್ನು ಕೊಡುವುದು ನ್ಯಾಯವಾದರೂ ಹಾಗೆ ಮಾಡುವುದರಿಂದ ಸಮಗ್ರ ಯುರೋಪಿನ ಅಧಿಕಾರವನ್ನು ಹಿಟ್ಲರನ ಕೈಗೆ ಸಮರ್ಪಿಸಿದಂತಾಗುತ್ತದೆ.



**ಹೊಸ ಸಮಸ್ಯೆ**

ಸುಡೇಟನ್ ಪ್ರಾಂತ್ಯವನ್ನು




ಜರ್ಮನರಿಗೆ ಕೊಟ್ಟೊಡನೆಯೇ ಪೋಲೆಂಡ್, ಇಟೆಲಿ, ಹಂಗೇರಿ ಯುಗೊಸ್ಲೇವಿಯಾ ಮೊದಲಾದ ರಾಷ್ಟ್ರಗಳು ಕೂಡಾ ತಮ್ಮ ಕೇಳಿಕೆಗಳನ್ನು ಮುಂದೆ ತರುವವು.



**ಫ್ರೆಂಚ್-ಬ್ರಿಟನ್ ಮಾತುಕತೆ**

ಬ್ರಿಟನ್ ಮತ್ತು ಫ್ರೆಂಚ್ ಮಂತ್ರಿಗಳು ಲಂಡನಿನಲ್ಲಿ ಇತ್ತೀಚೆಗೆ ಮಾತುಕತೆ ನಡಿಸಿ ಹಿಟ್ಲರನ ಹೇಳಿಕೆಗಳ ಕುರಿತು ಯೋಚಿಸಿದರು. ಇವೆರಡು ರಾಷ್ಟ್ರಗಳೊಳಗೆ ಸ್ವಲ್ಪ ಮಟ್ಟಿನ ಅಭಿಪ್ರಾಯವ್ಯತ್ಯಾಸವಿರುವುದಿದ್ದರೂ ಮುಂದಿನ ಧೋರಣೆಯು ಒಂದೇ ಎಂದು ಬ್ರಿಟಿಷ್ ಸರಕಾರವು ಪ್ರಕಟಿಸಿದೆ.



**ಜೆಕ್ ಚುನಾವಣೆ?**

ಜೆಕೊಸ್ಲೊವೇಕಿಯದಲ್ಲಿ ಮಹಾ ಚುನಾವಣೆಯಾಗದಿದ್ದರೆ ಜರ್ಮನಿಯು ತನ್ನ ಸೈನ್ಯ ಶಕ್ತಿಯನ್ನು ಸಂಪೂರ್ಣವಾಗಿ ಉಪಯೋಗಿಸುವುದೆಂದು ಹಿಟ್ಲರನು ಹೇಳಿದ್ದಾನೆ. 'ತಥಾಸ್ತು' ಎನ್ನುತ್ತಿದ್ದಾನೆ ಮುಸ್ಸೋಲಿನಿ. ಪೋಲೆಂಡು ಕೂಡಾ 'ಹಾಗೆಯೆ ಆಗಬೇಕು' ಎನ್ನುತ್ತಿದೆ. 'ಸತ್ತರೂ ಬಿಡಲಾರೆವು' ಎಂದು ಜೆಕೊಸ್ಲೊವೇಕಿಯದ ಅಧ್ಯಕ್ಷ ಡಾ|ಹಾಝಾರವರು ಉತ್ತರವಿತ್ತಿದ್ದಾರೆ.

---

**ಮುಖ ಪತ್ರದ ಚಿತ್ರ**

ಈ ಸಂಚಿಕೆಯ ಮುಖಪತ್ರದಲ್ಲಿರುವ ಪಡಿಯಚ್ಚು ಶೃಂಗೇರಿಯ ಶ್ರೀ. ಟಿ. ಕೆ. ಶ್ರೀನಿವಾಸ ಶೆಟ್ಟಿ— ಇವರ ಸೌಹಾರ್ದದಿಂದ.

# ಅಂತರಂಗ

**ಆದಿತ್ಯವಾರ, ಸಪ್ಟಂಬರ್ ೨೫, ೧೯೩೮**

ಅಂತರ್ ರಾಷ್ಟ್ರೀಯ ವಾತಾವರಣದಲ್ಲಿ ಯುದ್ಧದ ಕಾರ್ಮೋಡಗಳು ತುಂಬಿರುವುದರಿಂದ ಭಾವೀಯುದ್ಧದಲ್ಲಿ ಭಾರತದ ಧೋರಣೆಯಾವುದೆಂಬ ಪ್ರಶ್ನೆಯು ಸ್ವಾಭಾವಿಕವಾಗಿ ಉತ್ಪನ್ನವಾಗುತ್ತದೆ. ಕೇಂದ್ರ ವಿಧಾಯಕ ಸಭೆಯಲ್ಲಿ ಕಾಂಗ್ರೆಸ್ ಸದಸ್ಯರು ಮುಂದಿನಯುದ್ಧದಲ್ಲಿ ಬ್ರಿಟಿಷರಿಗೆ ಭಾರತವು ತನ್ನ ಬೆಂಬಲವನ್ನೀಯಲಾರದೆಂದು ಹೇಳಿರುವುದಕ್ಕೆ ಆಧಿಕ ಸದಸ್ಯರು ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸಿದ್ದಾರೆ. ಸಾಮ್ರಾಜ್ಯಶಾಹೀ ಯುದ್ಧದಲ್ಲಿ ಭಾರತವು ಭಾಗ ವಹಿಸಲಾರವೆಂಬ ಠರಾವು ಈ ಮೊದಲೇ ಕಾಂಗ್ರೆಸಿನಲ್ಲಿ ಮಂಜೂರು ಮಾಡಲ್ಪಟ್ಟಿದೆ. ಪಂಡಿತ ಜವಾಹಿರಲಾಲ ನೆಹರುಗಳಂದಿರುವಂತೆ ಭಾರತದ ವಿದೇಶ ಧೋರಣೆಯನ್ನು ಭಾರತೀಯರೇ ನಿಶ್ಚೈಸಬೇಕಲ್ಲದೆ ಬ್ರಿಟಿಷರು ಆಜ್ಞಾಪಿಸುವುದರಲ್ಲಿ ಅರ್ಥವಿಲ್ಲ. ಸಾಮ್ರಾಜ್ಯದಲ್ಲಿ ಭಾರತಕ್ಕೆ ಇತರ ವಸಾಹತುಗಳೊಡನೆ ಸಮಾನತೆಯನ್ನು ಕೊಡದಿದ್ದರೆ, ಭಾರತೀಯರಿಗೆ ಪೂರ್ಣ ಸ್ವಾತಂತ್ರ್ಯವನ್ನು ಅಲ್ಲಗಳೆಯುವುದಿದ್ದರೆ, ಬ್ರಿಟಿಷ್ ಸರಕಾರಕ್ಕೆ ಭಾರತೀಯರು ಬೆಂಬಲವನ್ನೀಯುವುದಾದರೂ ಹೇಗೆ? ಬ್ರಿಟಿಷ್ ನಿರ್ಣಯಗಳಿಂದ ಉಂಟಾಗುವ ಯುದ್ಧದಲ್ಲಿ ಭಾರತವು ಎಂದೂ ಕೈಹಾಕಲಾರದಲ್ಲದೆ ಅಂತಹ ಯತ್ನವನ್ನು ತಡೆಯಲು ಯತ್ನಿಸುವುದೆಂದು ಪಂಡಿತ ನೆಹರುಗಳು ಹೇಳಿದ್ದಾರೆ. ಭಾರತಕ್ಕೆ ಪೂರ್ಣ ಸ್ವಾತಂತ್ರ್ಯವು ದೊರಕಿದಾಗ, ಬ್ರಿಟನು ಸ್ವಾತಂತ್ರ್ಯ, ಪ್ರಜಾಸತ್ತೆ ಮತ್ತು ಲೋಕಶಾಂತಿಗಾಗಿ ಹೋರಾಡುವುದಿದ್ದರೆ ಮಾತ್ರ ಭಾರತೀಯರು ಬ್ರಿಟಿಷರಿಗೆ ಬೆಂಬಲವನ್ನೀಯುವರೆಂಬುದನ್ನು ಬ್ರಿಟಿಷ್ ಸರಕಾರವು ತಿಳಿಯಬೇಕಾಗಿದೆ.

---

## ಅಲೆಗಳು

ಯೂರೋಪಿನ ಅವ್ಯವಸ್ಥೆಯನ್ನು ಜನಾಂಗಸಭೆಯು ಕೂಡಾ ತಿಳಿದಿರುವುದಂತೆ.

ಆಶ್ಚರ್ಯ! ಅತ್ಯಾಶ್ಚರ್ಯ!!

.... .... ....

ಲಾರ್ಡ್ ರನ್ಸಿಮನರು ಸುಡೇಟನ್ ಪ್ರಾಂತ್ಯವನ್ನು ಜರ್ಮನರಿಗೆ ಕೊಡಬೇಕೆಂದು ಹೇಳಿದ್ದಾರಂತೆ.

ಅವರು ಬೇರೇನನ್ನೂ ಹೇಳಲಿಕ್ಕಿಲ್ಲವೆಂದು ಜರ್ಮನರಿಗೆ ಮೊದಲೇ ತಿಳಿದಿತ್ತು!

.... .... ....

ಶ್ರೀಮತಿ ವಿಜಯ ಲಕ್ಷ್ಮಿ ಪಂಡಿತರು ಜವಾಹರಲಾಲ ನೆಹರುಗಳ ಮಡದಿಯೆಂದು ಇಂಗ್ಲಿಷ್ ಪತ್ರಿಕೆಗಳು ಪ್ರಕಟಿಸಿದುವಂತೆ!

ಆ ಪತ್ರಿಕೋದ್ಯಮಿಗಳ ಅಗಾಧ ಜ್ಞಾನ ಸಂಗ್ರಹಕ್ಕಾಗಿ ನೊಬೆಲ್ ಪ್ರೈಜ್ ಕೊಡುವ ಯೋಚನೆಯಾಗುತ್ತಿರಬಹುದು.

.... .... ....

ಜನಾಂಗ ಸಭೆಯು ಮೊದಲು ಶಾಂತಿ ಸಾಧಕರ ಬೀಡಾಗಬೇಕೆಂದು ಸ್ಥಾಪಿಸಲ್ಪಟ್ಟಿತಂತೆ.

ಈಗ ಅದು ಯುದ್ಧ ಸಾಧಕರ ಬೀಡಾಗಿದೆ.

.... .... ....

ಭಾರತವು ಜನಾಂಗ ಸಭೆಗೆ ೧೦ ಲಕ್ಷ ರೂಪಾಯಿಗಳನ್ನು ಪ್ರತಿ ವರುಷ ಕೊಡುತ್ತಿದೆ.

ಭಾರತವು ಧರ್ಮದ ಬೀಡಲ್ಲವೆ!

.... .... ....

ಜನಾಂಗ ಸಭೆಯಲ್ಲಿ ಭಾರತದ ಪ್ರತಿನಿಧಿಗಳು ಇಲ್ಲವಂತೆ.

ಬ್ರಿಟಿಷ್ ಪ್ರತಿನಿಧಿಗಳಿದ್ದಾರಲ್ಲಾ! ಸಾಕು.

# ರಾಜಕುಮಾ

ಡ್ಯೂಕ್ ಆಫ್ ವಿಂಡ್ಸರರ
ಲ್ಪಟ್ಟಿದೆ. ಎರಡನೆ ಲೇ
ಪ್ರಹ

### ಡ್ಯೂಕ್ ಆಫ್ ವಿಂಡ್ಸರರ — ಜೀವನ —

೧೮೯೪! ಜಗತ್ತಿನಲ್ಲಿ ಅವ್ಯವಸ್ಥೆಯ ಸಂಜ್ಞೆಗಳು ಎಚ್ಚೆತ್ತು ಕಾಣುತ್ತಿದ್ದುವು. ಜೂನ್ ೨೩ ರಂದು ಸಾಯಂಕಾಲ ದಕ್ಷಿಣ ವೇಲ್ಸ್‌ನ ಗನಿಯೊಂದರಲ್ಲಿ ೨೬೮ ಮಂದಿ ಸತ್ತರು. ಮರುದಿನ ಫ್ರೆಂಚ್ ರಿಪಬ್ಲಿಕಿನ ಅಧ್ಯಕ್ಷರಾಗಿದ್ದ ಮೊನ್ಸಿಯರ್ ಸಾದಿ ಕಾರ್ನಟ್ ಎಂಬವರು ಲಿಯೋನ್ಸ್ ಎಂಬಲ್ಲಿ ಇಟಾಲಿಯನ್ ದಂಗೆಗಾರನಿಂದ ಕೊಲ್ಲಲ್ಪಟ್ಟರು. ಎರಡು ದಿನಗಳ ಬಳಿಕ ೭೫,೦೦೦ ಕೆಲಸಗಾರರು ಸ್ಕಾಟ್ಲೇಂಡಿನಲ್ಲಿ ಮುಷ್ಕರ ಹೂಡಿದರು.

△

**ಯುದ್ಧಪೀಡಿತ ಜಗತ್ತು!**

೧೮೯೪! ಯುರೋಪಿನ ವಿವಿಧ ಭಾಗಗಳಲ್ಲಿ ದಂಗೆಗಳು ಒಂದರ ಬಳಿಕೊಂದೆಂಬಂತೆ ಪ್ರಾರಂಭವಾಗುತ್ತಿದ್ದವು. ಜುಲೈ ತಿಂಗಳಲ್ಲಿ ಜಪಾನ್ ಚೀನದೊಡನೆ ಯುದ್ಧವನ್ನು ಆರಂಭಿಸಿತು. ವಿಕ್ಟೋರಿಯಾ ಮಹಾರಾಜ್ಞಿಯವರು ಬ್ರಿಟಿಷ್ ಸಾಮ್ರಾಜ್ಯವನ್ನಾಳಲಾರಂಭಿಸಿ ೫೮ ವರುಷಗಳು ಕಳೆದಿದ್ದುವು.

△

**ಜನನ**

ಜೂನ್ ೨೩, ಶನಿವಾರ ಸಾಯಂಕಾಲ ಇಂಗ್ಲೆಂಡಿನ ಎಲ್ಲಾ ಇಗರ್ಜಿಗಳಲ್ಲಿ ಗಂಟೆಯು ಬಾರಿಸಲ್ಪಟ್ಟಿತು. ತಂತಿಗಳು ವಿಕ್ಟೋರಿಯಾ ಮಹಾರಾಜ್ಞಿಗೂ ಐದನೆಯ ಜೋರ್ಜರಿಗೂ ಕಳುಹಿಸಲ್ಪಟ್ಟವು. ಆಗಿನ ಡ್ಯೂಕ್ ಮತ್ತು ಡಚೆಸ್ ಆಫ್ ಯಾರ್ಕರವರಿಗೆ ಒಂದು ಗಂಡು ಮಗುವು ಹುಟ್ಟಿತೆಂಬ ಸಂತೋಷದ ವಾರ್ತೆಯು ಎಲ್ಲೆಡೆಗಳಲ್ಲಿಯೂ ಹಬ್ಬಿತು

△

**ನಾಮಕರಣ**

ಯಾರ್ಕ್ ಡ್ಯೂಕರ ಪುತ್ರರ ನಾಮಕರಣ ಸಮಾರಂಭಕ್ಕೆ ಮಹತ್ವದ ಸಿದ್ಧತೆಗಳಾಗಿದ್ದುವು ವಿಕ್ಟೋರಿಯಾ ಮಹಾರಾಜ್ಞಿಯವರು ವಿಂಡ್ಸರಿನಿಂದ ರಿಚ್ಮಂಡಿಗೆ ಬಂದರು.

ವಿಶಾಲವಾದ ಪಡಶಾಲೆ. ಪೂರ್ಣವಾಗಿ ಶೃಂಗರಿಸಲ್ಪಟ್ಟ ಕಿಟಕಿ ಬಾಗಿಲುಗಳು. ಪಡಸಾಲೆಯ ಕಿಟಕಿಯೊಂದರಲ್ಲಿ ಕೆಂಪು ಬಟ್ಟೆಯ ಮೇಲೊಂದು ಚಿನ್ನದ ಕಲಶವು ಇಡಲ್ಪಟ್ಟಿತ್ತು. ರಾಜಕುಮಾರರ ನಾಮಕರಣ ಕಾಲದಲ್ಲಿ ಚಿನ್ನದ ಕಲಶವನ್ನಿಡುವುದು ಇಂಗ್ಲಿಷರ ಒಂದು ಪದ್ಧತಿ. ಶಿಶುವು ಮಹಾರಾಜ್ಞಿಯವರ ಕೈಗೆ ಸಮರ್ಪಿಸಲ್ಪಟ್ಟಿತು. ಅವರು ಕ್ಯಾಂಟರ್ಬರಿಯ ಆರ್ಚ್ ಬಿಷಪರಿಗೆ ಅದನ್ನೊಪ್ಪಿಸಿದರು. ನಾಮಕರಣ ಸಮಾರಂಭವಾಯಿತು. ಶಿಶುವಿಗೆ “ಎಡ್ವಾರ್ಡ್ ಆಲ್ಬರ್ಟ್ ಕ್ರಿಶ್ಚಿಯನ್ ಜೋರ್ಜ್ ಏಂಡ್ರ್ಯೂ ಪೇಟ್ರಿಕ್ ಡೇವಿಡ್” ಎಂದು ಹೆಸರಿಡಲ್ಪಟ್ಟಿತು.



ವಿಂಡ್ಸರ್ ಡ್ಯೂಕರು ರಾಜ್ಯತ್ಯಾಗ ಮಾಡಿದ ಕೆಲವು ದಿನಗಳ ಬಳಿಕ ಪ್ಯಾರಿಸಿನಲ್ಲಿ ತೆಗೆದ ವಿಂಡ್ಸರ್ ದಂಪತಿಗಳ ಭಾವಚಿತ್ರ.

△

**ಒಂದೇ ಮೋಟಾರ್ ಕಾರ್**

ಈ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಒಂದೇ ಒಂದು ಮೋಟಾರ್ ಕಾರಿತ್ತು. ಮಿ|| ಹ್ಯೂಟ್ಸನ್ ಎಂಬ

ವರು
ದ್ದರು.
ರವರು
ಷ್ಟರು.
ಆರ್ಚ್
ಯ
ಕಕ್ಕೆ
ಈಗಿನ
ಸರ್
ಫರ್ಡಿ
ಸಿದ್ಧಾ
ಮ್ಯೂ
ದಲ್ಲಿ
ಕೂಪ
ರೂ ಒ
ವಿನ್
ಸ್ಟಿನಲ್ಲಿ
ಯುತ್ತಿ
ನ್ನರು
ಹುಟ್ಟಿ

**ರಾಜ**

ಯೂ
ದರು.
ಅನ
ಅವರು
ಚಕ್ರ
ಗಳ

ಡ್ವರ್ ಮತ್ತು ಸತೀ ಸಿಂಪ್ಸನರ ಪ್ರೇಮ ಕಹಾನಿ

# ಡ್ವರ್ಡರ ಬಾಲ್ಯ

ಾದ ವರೆಗೆ ಬರೆಯು
-ಸಿಂಪ್ಸನರ ಪ್ರೇಮ
.

ಕುಮಾರರು ಬ್ರಿಟಿಷರ ರಾಜವಂಶಕ್ಕೆ ರತ್ನಪ್ರಾಯದಂತಿರುವರೆಂದು ಹಲವರು ಹೇಳಿದ್ದರೂ ಕೊನೆಗೆ ಅದೇ ಬ್ರಿಟಿಷ್ ಜನರು "ರಾಜರತ್ನ"ವನ್ನು ಕಡೆಗಣಿಸಿರುವುದು ಶೋಚನೀಯ!

^

### ರಾಜಕುಮಾರರ ತಮ್ಮ.

ಡ್ಯೂಕ್ ಆಫ್ ಯಾರ್ಕರಿಗೆ ಎರಡನೆ ಮಗುವೊಂದು ೧೮೯೫ರಲ್ಲಿ ಹುಟ್ಟಿತು. ಈ ಬಾರಿ ಪತ್ರಿಕೆಗಳು ಮಹತ್ವದ ಪ್ರಕಟನೆಗಳನ್ನು ಮಾಡಲಿಲ್ಲ. ರಾಜಕುಮಾರ ಎಡ್ವರ್ಡರು ಚಿಕ್ಕಂದಿನಲ್ಲಿಯೇ ಅದ್ವಿತೀಯವಾದ ಶೌರ್ಯ ಸಾಹಸಗಳನ್ನು ತೋರಿದ್ದರು. ಎಡ್ವಾರ್ಡರೆಂದರೆ ವಿಕ್ಟೋರಿಯಾ ರಾಜ್ಞಿಗೆ ತುಂಬಾ ಪ್ರೇಮ. ಸ್ವಲ್ಪ ಸಮಯದ ಬಳಿಕ ಎಡ್ವಾರ್ಡರಿಗೆ ಒಬ್ಬ ತಂಗಿ ಹುಟ್ಟಿದಳು. ವಿಕ್ಟೋರಿಯಾ ರಾಜ್ಞಿಯ ಸುತ್ತಲೂ ಮೂರು ಮಕ್ಕಳು ನಿಂತಿರುವ ಒಂದು ಭಾವಚಿತ್ರವನ್ನು ೪೦ ವರುಷಗಳ ನಂತರ ಲಂಡನಿನ ಒಂದು ಪತ್ರಿಕೆಯು ಪ್ರಕಟಿಸಿತು. ಆದರೆ ರಾಜ್ಯತ್ಯಾಗ ಮಾಡಿದ ಅವರ ಹೆಸರನ್ನು ಕೂಡಾ ಸೂಚಿಸದೆ, ಆ ಭಾವಚಿತ್ರದಲ್ಲಿದ್ದ ಮಗುವೊಂದರ ಹೆಸರನ್ನೇ ಬಚ್ಚಿಟ್ಟಿತು.

Δ

### ಆದರ್ಶ ಯುವಕ.

ಎಡ್ವಾರ್ಡರು ಇಂಗ್ಲೆಂಡಿನ ಅದೆಷ್ಟೋ ಮಂದಿ ಯುವಕರಿಗೆ ಆದರ್ಶರಾಗಿದ್ದರು. ತನ್ನ ಮೂರುದ್ದ ಹೆಸರಿನಲ್ಲಿ ಎಡ್ವಾರ್ಡನ್ನುಳಿದು ಮಿಕ್ಕುಳಿದದನ್ನು ಅವರು ಬಿಟ್ಟು ಬಿಟ್ಟಿದ್ದರು. ಅವರು ವಿಕ್ಟೋರಿಯಾ ಯುಗದಲ್ಲಿ ಅಷ್ಟು ಮುಂದರಿದುದನ್ನು ನೋಡುವಾಗ ಅನಂತರ ಅವರ ಮನೋವೃತ್ತಿಯು ಎಷ್ಟು ವಿಶಾಲವಾಗಿದ್ದಿರಬಹುದೆಂದು ವ್ಯಕ್ತವಾಗುತ್ತದೆ.



ಡಚೆಸ್ ಆಫ್ ವಿಂಡ್ಸರಳ ಇತ್ತೀಚಿಗಿನ ಭಾವಚಿತ್ರ.

Δ

### ಪ್ರಿನ್ಸ್ ಆಫ್ ವೇಲ್ಸ್.

ಏಳನೆಯ ಎಡ್ವಾರ್ಡರು ಸ್ವರ್ಗಸ್ಥರಾದೊಡನೆ ಐದನೆಯ ಜಾರ್ಜರು ಪಟ್ಟಕ್ಕೆ ಬಂದರು. ತರುಣ ಎಡ್ವಾರ್ಡರು ತಂದೆಯ ಕೊರೊನೇಶನಾದ ಬಳಿಕ ಕಾರ್‌ನಾರ್ವನ್ ಅರಮನೆಯಲ್ಲಿ ಪ್ರಿನ್ಸ್ ಆಫ್ ವೇಲ್ಸ್ ಪಟ್ಟಮಹೋತ್ಸವದಲ್ಲಿ ಭಾಗವಹಿಸಿದರು. ಲಾಯಡ್ ಜಾರ್ಜರ ಸಹಾಯದಿಂದ ಅವರು ಹಲವು ಭಾಷಣಗಳನ್ನು ಮಾಡಿದ್ದರು ವೇಲ್ಸಿನ ಜನರು– ವಿಶೇಷವಾಗಿ ಬಡ ಜನರು, ಪ್ರಿನ್ಸ್ ಆಫ್ ವೇಲ್ಸರ ರಾಜ್ಯಭಾರದಿಂದ ಸಂತುಷ್ಟರಾದರು.

ಲೇಖಾಂಕ
— ೧ —

ತನ್ನ ಹದಿನೇಳನೆಯ ವಯಸ್ಸಿನಲ್ಲಿ ತರುಣ ರಾಜಕುಮಾರರೊಬ್ಬರು ಜನತೆಯ ಮುಂದೆ ಪತಂಗದಂತೆ ಹಾರಿ ಸಾವಿರಾರು ಮಂದಿಯ ಕಣ್ಮನವನ್ನು ತಣಿಸಿದರು. ಎಡ್ವರ್ಡರ ಸ್ವತಂತ್ರ ಮನೋವೃತ್ತಿಯು ಸಾವಿರಾರು ಮಂದಿಯ ಮನಸ್ಸನ್ನು ಮೆಚ್ಚಿಸಿ ಬಿಟ್ಟಿತ್ತು.

[ಈ ಲೇಖಾಂಕದಲ್ಲಿ ವಿಂಡ್ಸರರ ಬಾಲ್ಯವು ವಿವರಿಸಲ್ಪಟ್ಟಿದೆ. ಎರಡನೆಯ ಲೇಖಾಂಕದಲ್ಲಿ ಎಡ್ವರ್ಡರಿಗೆ ಸತೀ ಸಿಂಪ್ಸನಳ ಪರಿಚಯವಾಗುವುದು. ಜಗತ್ತಿನಲ್ಲಿ ಹಿಂದೆಂದೂ ನಡೆಯದ ಈ ಅದ್ಭುತ ರಮ್ಯ ಕಥೆಯ ಸ್ವಾರಸ್ಯಮಯ ಭಾಗವನ್ನು ಮುಂದಿನ ಸಂಚಿಕೆಯಲ್ಲೋದಿರಿ.]

# ನಮ್ಮ ಭಾರತದಲ್ಲಿ

## ಇನ್ನೂ ಮುಗಿಯಲಿಲ್ಲ.

ಖರೆ ಪ್ರಕರಣವು ಇನ್ನೂ ಮುಗಿಯಲಿಲ್ಲ. ರಾಷ್ಟ್ರಪತಿ ಬೋಸರೂ, ಡಾ|| ಖರೆಯವರೂ ಹೇಳಿಕೆಗಳ ಮೇಲೆ ಹೇಳಿಕೆಗಳನ್ನು ಹೊರಡಿಸುತ್ತಿದ್ದಾರೆ. ಇಬ್ಬರೂ ಹೊಸ ಹೊಸ ವಿಚಾರಗಳನ್ನು ಹೊರ ತರುತ್ತಿರುವುದಲ್ಲದೆ ಈಗಾಗಲೆ ಜನತೆಯ ಮುಂದಿರುವವುಗಳನ್ನು ವಿವರಿಸುವುದಿಲ್ಲ. ಅಖಿಲ ಭಾರತ ಕಾಂಗ್ರೆಸ್ ಕಮಿಟಿಯಲ್ಲಿ ಈ ಪ್ರಕರಣಕ್ಕೆ "ಇತಿಶ್ರೀ" ಮಾಡಲ್ಪಡಬಹುದೆಂದು ನಿರೀಕ್ಷಿಸಲ್ಪಟ್ಟಿದೆ.

* * *

## ಅತ್ಯವಶ್ಯ ಕಾಯಿದೆ.

ಸಂಯುಕ್ತ ಪ್ರಾಂತ್ಯದ ಡಾ|| ಜವಾಹರಲಾಲ್ ಎಂಬವರು ಒಂದು ಹೊಸ ಮಸೂದೆಯನ್ನು ತಂದು ಮಹಿಳಾಶ್ರಮ, ಅನಾಥಾಲಯ, ವಿಧವಾ ಗೃಹ ಇತ್ಯಾದಿಗಳಲ್ಲಿ ನಡೆಯುವ ಅನಾಚಾರ, ಅತ್ಯಾಚಾರಗಳನ್ನು ಕಾಯಿದೆಯೇ ನಿಲ್ಲಿಸಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಇಂತಹ ಮಸೂದೆಯು ಎಲ್ಲಾ ಪ್ರಾಂತ್ಯಗಳಲ್ಲಿಯೂ ತರಲ್ಪಟ್ಟರೆ ತುಂಬಾ ಪ್ರಯೋಜನವಾಗಬಹುದು

* * *

### ಮೈಸೂರು ಮಹಾರಾಜರು



"ಮೈಸೂರಿನ ಪ್ರಜೆಗಳ ಶಕ್ತಿಯು ಮೈಸೂರಿನ ಆಳುವ ಮಹಾರಾಜರ ಆಧ್ಯಾತ್ಮಿಕ ಶಕ್ತಿಯಮೇಲೆ ಹೊಂದಿಕೊಂಡಿದೆ" ಎಂದು ಶ್ರೀ. ಬಿ. ಯಂ. ಶ್ರೀಕಂಠಯ್ಯನವರು ನಂಜನಗೂಡಿನಲ್ಲಿ, ಮೈಸೂರು ದಿನಾಚರಣೆಯ ಕಾಲದಲ್ಲಿ ಹೇಳಿದರು.

## ಮಿಶ್ರಮಂತ್ರಿ ಮಂಡಲಗಳು.

ಕಾಗ್ರೆಸ್ ಮಿಶ್ರ ಮಂತ್ರಿಮಂಡಲಗಳು ಸ್ಥಾಪನೆಯಾಗಲಾರಂಭಿಸಿವೆ. ಅಸ್ಸಾಮಿನಲ್ಲಿ ಈಗಾಗಲೆ ಒಂದು ಮಂತ್ರಿಮಂಡಲವು ಶ್ರೀ. ಗೋಪಿನಾಥ ಬಾರ್ದಲಾಯರ ಧುರೀಣತ್ವದಲ್ಲಿ ಅಧಿಕಾರ ನಡೆಸಲಾರಂಭಿಸಿರುವುದಿದ್ದರೂ, ಬಲವಾದ ಬೆಂಬಲವಿಲ್ಲದ ಈ ಮಿಶ್ರಮಂತ್ರಿ ಮಂಡಲವು ಬಹುಕಾಲ ಬಾಳುವುದೆಂದು ನಂಬಲಾಗುವುದಿಲ್ಲ. ಮಿಶ್ರ ಮಂತ್ರಿಮಂಡಲಗಳಿಂದ ಕಾಂಗ್ರೆಸಿಗೆ ಪ್ರಯೋಜನವಿದೆಯೆಂದು ಕಂಡರೂ ಅವುಗಳ ಮೇಲೆ ಪೂರ್ಣಾಧಿಕಾರವಿಲ್ಲದಿದ್ದುದರಿಂದ ಕಾಂಗ್ರೆಸ್ ಈ ಕಾರ್ಯಕ್ಕೆ ಕೈಹಚ್ಚಿರುವುದು ಯೋಗ್ಯವೆಂದೆನ್ನುವುದು ಯೋಗ್ಯವೆನಿಸಲಾರದು.

* * *

## ಯುರೋಪಿಗೆ ಭಾರತೀಯ ಸೈನ್ಯ!

ಲಕ್ನೋ, ಜಬ್ಬಲ್‌ಪುರ ಮತ್ತು ಡೆಹರಾಡೂನಿನಿಂದ ಭಾರತೀಯ ಸೈನ್ಯವನ್ನು ಯುರೋಪಿಗೆ ಕಳುಹಿಸುವ ಏರ್ಪಾಡಾಗಿದೆಯೆಂದು ಈಗಾಗಲೆ ತಿಳಿದು ಬಂದಿದೆ. ಸಾಮ್ರಾಜ್ಯಶಾಹೀ ಯುದ್ಧದಲ್ಲಿ ಭಾಗವಹಿಸುವುದಿಲ್ಲವೆಂದು ಕಾಂಗ್ರೆಸ್ ಹೇಳಿದರೂ ಭಾರತೀಯ ಸೈನ್ಯವನ್ನು ಆಳರಸರು ಉಪಯೋಗಿಸಲಾರಂಭಿಸಿದ್ದಾರೆ.

* * *

## ಬ್ರಿಟಿಷ್ ಸೈನ್ಯದ ಖರ್ಚು!

ಬ್ರಿಟಿಷರೇ ಬ್ರಿಟಿಷ್ ಸೈನ್ಯದ ಖರ್ಚನ್ನು ವಹಿಸಬೇಕೆಂದು

ಹೀಗೆ ಮಾಡಿದರೆ ಭಾರತೀಯರಿಗೆ ನ್ಯಾಯವನ್ನು ತೋರಿಸಿದಂತಾಗುವುದೆಂದೂ ಕೇಂದ್ರ ವಿಧಾಯಕ ಸಭೆಯಲ್ಲಿ ಶ್ರೀ. ಮನು ಸುಬೇದಾರರು ಹೇಳಿದ್ದಾರೆ. ಬ್ರಿಟಿಷ್ ಸರಕಾರವೂ ಇದಕ್ಕೊಪ್ಪಿದರೆ ಭಾರತಕ್ಕೆ ೧೨ ಕೋಟಿ ರೂಪಾಯಿ ಉಳಿದಂತಾಗುತ್ತದೆ. ಬ್ರಿಟನು ಈ ಸೂಚನೆಗೊಪ್ಪುವಂತೆ ಮಾಡುವ ಹೊಣೆಗಾರಿಕೆಯು ಭಾರತೀಯರನ್ನು ಹೊಂದಿಕೊಂಡಿದೆ.

* * *

**ಕರ್ನಲ್ ಮ್ಯೂರ್ ಹೆಡ್ಡರ ಸಂಚಾರ!**

ಭಾರತದ ಉಪಮಂತ್ರಿಗಳಾದ ಕರ್ನಲ್ ಮ್ಯೂರ್ ಹೆಡ್‌ರವರು ಫೆಡರೇಶನಿನ ಕುರಿತು ಚರ್ಚಿಸಲಿಕ್ಕೆ ಬರುವುದಲ್ಲವೆಂದು ಪುನಃ ಕೇಂದ್ರ ವಿಧಾಯಕ ಸಭೆಯಲ್ಲಿ ಹೇಳಲಟ್ಟಿದೆ. "ಸಾರ್ವಜನಿಕ ಸುಳ್ಳಿನ" ನವೀನ ಮಾದರಿಯಿದು!

* * *

**ತಿರುವಾಂಕೂರಿನ ಯಾಗ!**

ಎಂದಿನಂತೆ ಭರದಿಂದ ನಡೆಯುತ್ತಿದೆ. ಪೂಜಾರಿ ಸರ್. ಸಿ. ಪಿ. ರಾಮಸ್ವಾಮಿ ಐಯ್ಯರ್‌ರವರು ಆರ್ಡಿನೆನ್ಸುಗಳ ಜಪವನ್ನು ಮಾಡುತ್ತಿದ್ದಾರೆ. ಕೇರಳದಿಂದ ಸತ್ಯಾಗ್ರಹದಲ್ಲಿ ಭಾಗ ವಹಿಸಲು ಅನೇಕ ಮಂದಿ ಹೋಗಿದ್ದಾರೆ. ದಕ್ಷಿಣ ಕನ್ನಡದಿಂದ ೧೦ ಮಂದಿ ಸ್ವಯಂ ಸೇವಕರು ತಿರುವಾಂಕೂರಿಗೆ ಕಳುಹಿಸಲ್ಪಟ್ಟಿದ್ದಾರೆ. ಮಹಾತ್ಮಾಜಿಯ ಕೂಡೂ ತಿರುವಾಂಕೂರಿನ ವಿಲ್ಲಿಂಗ್ಡನ್ ಸಾಹೇಬರಗೂ ಚರ್ಚೆಯಾಗುತ್ತಿದೆ. ಸದ್ಯದಲ್ಲಿಯೇ ಒಂದು ದಂಡು ಮೇಜಿನ ಪರಿಷತ್ತನ್ನು ಕರೆದು 'ಯಾಗ'ವನ್ನು ನಿಲ್ಲಿಸುವ ಯತ್ನಗಳು ನಡೆಯುತ್ತಿವೆ.

*

**ಢಿಲ್ಲಿ ದೇವಸ್ಥಾನ ಚಳವಳ.**

ಢಿಲ್ಲಿ ದೇವಸ್ಥಾನದ ಪೂಜೆಯ ಚಳವಳದ ಕುರಿತು ಅಲ್ಲಿಯ ಸರಕಾರವು ಅನುಸರಿಸಿಕೊಂಡು ಬಂದಿರುವ ಧೋರಣೆಯನ್ನು ಇನ್ನೂ ಬದಲಾಯಿಸಲಿಲ್ಲ. ಭಕ್ತರು ಸೆರೆಹಿಡಿಯಲ್ಪಡುವುದಲ್ಲದೆ ಕ್ರಿ. ಪೊ. ಕೋಡಿನ ಸೆಕ್ಷನ್ ೧೪೪ ಇನ್ನೊಂದು ವಾರದ ತನಕ ಜಾರಿಯಲ್ಲಿರುವುದೆಂದು ಸರಕಾರದವರು ಪ್ರಕಟಿಸಿದ್ದಾರೆ.

* * *

**ಮೈಸೂರಿನ ದಿನಾಚರಣೆ.**

ಮೈಸೂರು ಸಂಸ್ಥಾನದ ನಂಜನಗೂಡಿನಲ್ಲಿ "ಮೈಸೂರು ದಿನಾಚರಣೆ"ಯು ಆಚರಿಸಲ್ಪಟ್ಟಿತು. ಶ್ರೀಗಳಾದ ಬಿ. ಎಂ. ಶ್ರೀ ಕಂಠಯ್ಯ, ತಗಡೂರು ರಾಮಚಂದ್ರರಾವ್ ಮೊದಲಾದವರು ಸಭೆಯಲ್ಲಿ ಭಾಗ ವಹಿಸಿದ್ದರು. ಮೈಸೂರಿನ ಗಂಡಭೇರುಂಡ ಧ್ವಜವನ್ನು ಸಾರ್ವಜನಿಕರು ಉಪಯೋಗಿಸಿರುವುದು ಇದೇ ಮೊದಲನೆ ಬಾರಿ.

* * *

**ಮೈಸೂರಿನ ದಸರಾ ಮಹೋತ್ಸವದಲ್ಲಿ—**



ಶ್ರೀಮನ್ಮಹಾರಾಜರ ಜಂಬೂಸವಾರಿಯು ಅತ್ಯಪೂರ್ವವಾದುದು.

**'ಮಹಾರಾಜರ ಆಧ್ಯಾತ್ಮಿಕ ಶಕ್ತಿ'**

'ಮೈಸೂರಿನ ಪ್ರಜೆಗಳ ಶಕ್ತಿಯು ಮೈಸೂರು ಮಹಾರಾಜರ ಆಧ್ಯಾತ್ಮಿಕ ಶಕ್ತಿಯ ಮೇಲೆ ಹೊಂದಿಕೊಂಡಿದೆ'ಯೆಂದು ಶ್ರೀ. ಬಿ. ಯಂ. ಶ್ರೀ ಕಂಠಯ್ಯನವರು ಹೇಳಿದರು. ಈ ದಿನಾಚರಣೆಯಲ್ಲಿ ಮೈಸೂರಿನ ಡಿಪ್ಯುಟಿ ಕಮೀಷನರಾದ ಮಿ| ಯಂ. ಜಿ. ಮೇಖ್ರಿಯವರು ಧ್ವಜಾರೋಹಣ ಮಾಡಿದರು.

---

## ನೀವು ಪ್ರಪಂಚದ ವೈಶಿಷ್ಟ್ಯಗಳನ್ನು ತಿಳಿಯಬಯಸುವಿರಾ : : : ?

ಹಾಗಾದರೆ

ಪ್ರತಿಯೊಂದು ಸಂಚಿಕೆಯಲ್ಲೂ ಪ್ರಕಟವಾಗುವ **ಮಿಸ್ಟರ್ ಜಮದಗ್ನಿ** ಯವರ ರಿಪೋರ್ಟು - ಯಾ - ಸಿಂಹಾವಲೋಕನವನ್ನು ಓದಲು ಮರೆಯಬೇಡಿರಿ

ಪ್ರತಿ ತಿಂಗಳ ತಾ. 15ಕ್ಕೆ ಪ್ರಕಟವಾಗುವ

# ವರ್ತಕ ಧುರೀಣ

ಆಧುನಿಕ ಭಾರತಕೊಪ್ಪುವ ರಾಷ್ಟ್ರೀಯ ಧ್ಯೇಯದ ಮಾಸ ಪತ್ರಿಕೆಯನ್ನು ಅಗತ್ಯವಾಗಿ ಓದಲೇಬೇಕು

ಈ ಪತ್ರಿಕೆಯಲ್ಲಿ ವಿದ್ವಜ್ಜನರಿಂದ ಬರೆಯಲ್ಪಡುವ ರಾಜಕೀಯ, ಸಾಮಾಜಿಕ, ಐತಿಹಾಸಿಕ, ಪ್ರಾಪಂಚಿಕ, ಧಾರ್ಮಿಕ ಮೊದಲಾದ ವಿವಿಧ ಲೇಖನಗಳೂ, ಕಥೆಗಳೂ, ಉಪನ್ಯಾಸಗಳೂ, ಟೀಕೆ-ಟಿಪ್ಪಣಿಗಳೂ ಪ್ರಕಟವಾಗುತ್ತಿವೆ.

ಯಾವುದೇ ಸರಕಿನ ಪ್ರಚಾರವಾಗಬೇಕಾದರೂ - ಈ - ಪತ್ರಿಕೆಯು ಜಾಹೀರಾತುದಾರರಿಗೊಂದು **ಉತ್ತಮ ಸಾಧನ** ಜಾಹೀರಾತುಗಳ ದರಕ್ಕೆ ಕೆಳಗಿನ ವಿಳಾಸಕ್ಕೆ ಬರೆದುಕೊಳ್ಳಿರಿ.

**೧೯೩೩ರಲ್ಲಿ ಜನ್ಮವೆತ್ತಿ ಜನಾದರಣೀಯವಾದ**

**ಈ ಪತ್ರಿಕೆಯು ತನ್ನದೇ ಆದ ಒಂದು ವಿಶಿಷ್ಟ ಧ್ಯೇಯವನ್ನು ಕಾಯ್ದುಕೊಂಡಿದೆ**

ವಾರ್ಷಿಕ ಚಂದಾ: ಊರವರಿಗೂ / ಪರಊರವರಿಗೂ : ರೂ. 1-8-0

ಬಿಡಿ ಸಂಚಿಕೆ 0-2-0
ಹಿಂದಿನ ಸಂಚಿಕೆ 0-3-0

ಪ್ರೊಪ್ರೈಟರ್, ವರ್ತಕ ಧುರೀಣ, ಉಡುಪಿ, ದಕ್ಷಿಣ ಭಾರತ.

---

(Regd)

# ಮೇಹಧ್ವಂಸಿನಿ




ಗುಪ್ತ ವ್ಯಾಧಿಗಳ ಮೇಲೆ ಬ್ರಹ್ಮಾಸ್ತ್ರ! ನೋವನ್ನು ಕೊಡುವ ಶಸ್ತ್ರ ಚಿಕಿತ್ಸೆ ಅನಾವಶ್ಯಕ. ಶರೀರವನ್ನು ಕೃಶಿಸಿ ಮಾನವನ ಜೀವ ಶ್ರವಗ್ಗೆಯ್ಯುತ್ತಿರುವ ಬಿಳುಪು, ಕೆಂಪು, ಪರಂಗಿ ಹುಣ್ಣು, ಮೇಹ ಗಡ್ಡೆ, ಮೇಹ ಜ್ವರ, ಚರ್ಮವ್ಯಾಧಿ, ಕೀಲುಗಳ ನೋವು, ಅತಿ ಮೂತ್ರ ವಗೈರೆ ಚಿನ್ಹೆಗಳನ್ನು 'ಮೇಹಧ್ವಂಸಿನಿ'ಯು ಶೀಘ್ರವಾಗಿ ಖಂಡಿಸಿ, ರಕ್ತಶುದ್ಧಿ ಮಾಡಿ ನರಗಳಿಗೆ ಬಲವನ್ನೀಯುವುದು. ಸೇವಿಸುವುದಕ್ಕೆ ಹಿತಕರ. ಪ್ರತಿಯೊಂದು ಹೊತ್ತಿನ ಔಷಧದಲ್ಲಿಯೂ ಅದ್ಭುತ [illegible]

ದೊಡ್ಡ ಸೈಜು 4-0-0. ಮೀಡಿಯಂ ಸೈಜು 2-4-0. ಚಿಕ್ಕ 1-2-0.

ಹಂಚಕೊಡುವ ಪ್ರಮುಖರು:—ಬಾಸೆಲ್ ಮಿಶ್ಯನ್ ಪ್ರೆಸ್ ಮಂಗಳೂರು.

ಸಬ್ ಏಜಂಟರು:—ಉಡ್ಪಿ ಮಿಶ್ಯನ್ ಶೋಪ್, ಸಂತೆಕಟ್ಟೆ, ಉಡುಪಿ.

ವಿ. ವಿ. ಶೆಣೈ, ಕಾರ್ಕಳ. ಭಕ್ತಾ ಬ್ರದರ್ಸ್, ಕಾಸರಗೋಡು.

# ಛಾಯಾ ಲೋಕ

ಸಂಗ್ರಾಹಕರು:
ಶ್ರೀ. ಹಯವದನ ರಾಯರು.

**ನಾವು 'ಸ್ಮೆಲ್ಲೀ' ನೋಡಲು ಹೋಗೋಣ.**

ಹೀಗಂದರೇನೆಂದು ಆಶ್ಚರ್ಯಪಡಬಹುದು. "ನಾವು 'ಟಾಕಿ' ನೋಡಲು ಹೋಗೋಣ" ಎಂದು ನೀವೀಗ ಹೇಳುವುದಿಲ್ಲವೆ? ಕೆಲವು ವರುಷ ಹಿಂದೆ "ಟಾಕಿ" ಎಂದೊಡನೆಯೇ ಆಶ್ಚರ್ಯಪಟ್ಟು ಏನು ಚಲನಚಿತ್ರಗಳು ಚಲಿಸುವುದಲ್ಲದೆ ಮಾತಾಡುತ್ತವೆಯೇ! ಎಂದು ನೀವು ಕೇಳುತ್ತಿದ್ದಿರಿ. ಸರಿ, ವಾಕ್ಪಟಗಳಶೋಧನೆಯಾಗಿ, ರಜತಪರದೆಯ ಮೇಲೆ ನೀವು ಮಾತಾಡುವ ಚಿತ್ರಗಳನ್ನು ಕಣ್ಣಾರೆ ನೋಡುತ್ತಿರುವುದರಿಂದ ಅದನ್ನು ನಂಬುತ್ತೀರಿ.

**ಚಿತ್ರದಲ್ಲಿ**

ಹಲವು ವರುಷಗಳ ಹಿಂದೆ ಜಾರ್ಜ್ ಪಾನಿಯನ್ ಎಂಬವನು ನ್ಯೂಯಾರ್ಕಿನ ಸಿನೆಮಾಗೃಹದಲ್ಲಿ ಕುಳಿತು ಅತ್ಲಾಂತಿಕ ಸಾಗರದ ಅಲೆಗಳು ದೊಡ್ಡ ಬಂಡೆಗಳಿಗೆ ಹೊಡೆಯುವುದನ್ನು ಕಂಡನು. ಆ ಅಲೆಗಳ ಶಬ್ದ ಮತ್ತು ರೂಪವು ತನಗೆ ಕಾಣಿಸುವಂತೆಯೇ ಸಮುದ್ರದ ಉಪ್ಪು ನೀರಿನ ಪರಿಮಳವನ್ನು ಚಿತ್ರದಿಂದಲೇ ತಿಳಿಯುವಂತಾದರೆ ಹೇಗಾಗುತ್ತಿತ್ತು ಎಂಬ ಭಾವನೆಯು ಅವನಲ್ಲುಂಟಾಯಿತಂತೆ.

ಸರಿ. ಈ ಭಾವನೆಯು ಅವನಲ್ಲಿ ಬೇರೂರುತ್ತಾ ಬಂತು. ಈ ಭಾವನೆಯನ್ನು ಕಾರ್ಯರೂಪಕ್ಕೆ ತರುವುದಕ್ಕಾಗಿ ಅವನು ತನ್ನ ವೇಧಶಾಲೆಯಲ್ಲಿ ಕೆಲಸಮಾಡುತ್ತಿದ್ದಾನೆ. ಚಲನ ಚಿತ್ರಗಳಲ್ಲಿ ಪ್ರದರ್ಶಿಸಲ್ಪಡುವ ಎಲ್ಲಾ ವಸ್ತುಗಳ ಪರಿಮಳವು ನೋಡುವವರಿಗೆ ಬರುವಂತೆ ಮಾಡುವುದೇ ಇವನ ಸಾಧನೆ. ಇದಕ್ಕಾಗಿ ಅವನು ಮಹತ್ವದ ಸಾಮಗ್ರಿಗಳನ್ನು ಕಂಡುಹಿಡಿಯಲಿಲ್ಲ.

**ನವೀನ ಯಂತ್ರ**

ಒಂದು ಉದ್ದವಾದ ಕೆರೆಯಂತಿರುವ ಪಾತ್ರೆಯಲ್ಲಿ ಏಳು ಭಾಗಗಳನ್ನು ಮಾಡಿ, ಆರು ಭಾಗಗಳಲ್ಲಿ ಹೂವಿನ ಪರಿಮಳವು ಬರುವ ಏರ್ಪಾಡನ್ನು ಅವನು ಮಾಡಿದ್ದಾನೆ. ಏಳನೆ ವಿಭಾಗದಲ್ಲಿ ಅಯಾಯ ಕಾಲಕ್ಕೆ ಬೇಕಾದ ಪರಿಮಳವು ಬರುವಂತೆ ಮಾಡುವ ರಸಾಯನಗಳಿವೆ.



ಪ್ರಸಿದ್ಧ ಚೀನೀಯ ನಟಿ ಎನ್ನಾ ಮೇ ವಾಂಗ್.

ಚಲನಚಿತ್ರವು ತೋರಿಸಲ್ಪಡುವ ಮೂರು ನಿಮಿಷಗಳ ಮೊದಲು ಈ ಪರಿಮಳವು ಹರಡಲಾರಂಭಿಸುತ್ತದೆ.

**ಸಮಸ್ಯೆ!**

ಈ ವೈಜ್ಞಾನಿಕನ ಮಹತ್ವದ ಸಮಸ್ಯೆಯೆಂದರೆ ಪ್ರದರ್ಶಿಸುವ ದೃಶ್ಯಕ್ಕೆ ಪರಿಮಳವನ್ನು ಜೊತೆಗೊಳಿಸುವುದು ಹೇಗೆ ಎಂಬುದಾಗಿದೆ. ಸಮುದ್ರ ಕಿನಾರೆಯ ದೃಶ್ಯವಾದೊಡನೆ ಹೂದೋಟದ ದೃಶ್ಯವನ್ನು ತೋರಿಸುವಾಗ ಉಪ್ಪು ನೀರಿನ ಪರಿಮಳದ ಬದಲು ಹೂವಿನ ಪರಿಮಳವುಂಟಾಗುವುದು ಹೇಗೆ?

**ಪಾನಿಯನನ ಸಾಹಸ!**

ಈಗಾಗಲೆ ವೈಜ್ಞಾನಿಕ ಪಾನಿಯನ್ ಕೆಲವು ಅತ್ಯದ್ಭುತ ಪ್ರದರ್ಶನಗಳನ್ನೂ ಮಾಡಿ ತೋರಿಸಿದ್ದಾನೆ. ಅವನ ವೇಧ ಶಾಲೆಯಲ್ಲಿ ಆಫ್ರಿಕದ ಒಂದು ದೃಶ್ಯವು ತೋರಿಸಲ್ಪಟ್ಟಿತು. ಕೂಡಲೆ ದಟ್ಟವಾದ ಕಾಡಿನಲ್ಲಿ ಕಪಿಯೊಂದು ಹಾರಾಡುವ ನೋಟವು ಪ್ರದರ್ಶಿಸಲ್ಪಟ್ಟಿತು. ಈ ಎರಡು ದೃಶ್ಯಗಳ ಬಣ್ಣಗಳು ಅತ್ಯಂತ ಸ್ವಾಭಾವಿಕವಾಗಿದ್ದುವು. ಕೂಡಲೆ ಚಲನ ಚಿತ್ರವನ್ನು ನೋಡಿದ ಜನರಿಗೆ ಅಲ್ಲಿಯ ಹವೆಯು ಉಷ್ಣವಾಗಿರುವಂತೆ ಕಂಡಿತು. ಕಾಡಿನಲ್ಲಿದ್ದ ಭಾವನೆಯು ಅವರಲ್ಲುಂಟಾಯಿತು. ಆಗ ತಾನೆ

(೩೩ನೇ ಪುಟ ನೋಡಿರಿ)

# ವಿಚಿತ್ರವಾದರೂ ಪೂರಾ ಸತ್ಯ

**ಈ ಮಹಾಶಯನ ವಿಚಿತ್ರ ಕಸಬು.**

ನೀವು ಚಲಚಿತ್ರಗಳಲ್ಲಿ ನೋಡುವ ಹಳೆ ಮೋಟಾರು ಕಾರುಗಳನ್ನೊದಗಿಸುವ ಮಹಾಶಯನನ್ನು ಕಾಣುವಿರಾ? ಹರ್ಟ್‌ಫಾರ್ಡಶಯರಿನ ವಾಟ್ಫರ್ಡ್ ಎಂಬಲ್ಲಿದ್ದಾನೆ. ಜೇಕ್ ಪಾರ್ಸ್ನರ್ ಎಂದವನ ಹೆಸರು.

ಆರು ವರುಷಗಳ ಹಿಂದೆ ಮಿ|| ಪಾರ್ಸ್ನರ್‌ನನ್ನು ಚಲಚಿತ್ರ ಕಂಪೆನಿಯವರು ಬಾಡಿಗೆಗೆ ಕೊಂಡು ಕೊಂಡರು. ಹಳೆ ಕಾಲದ ಮೋಟಾರ್ ಕಾರುಗಳು ಸಿಗುವುದು ಅಪರೂಪವಾಗಿರುವುದರಿಂದ ಈ ಮಹಾಶಯನು ಹಾಳಾದ ಮೋಟಾರ್ ಕಾರುಗಳನ್ನು ಸಂಗ್ರಹಿಸುವ ಕೆಲಸ ಮಾಡಲಾರಂಭಿಸಿದ.

ಅಂತಿಮಾವಸ್ಥೆಯಲ್ಲಿರುವ ಮೋಟಾರ್ ಕಾರುಗಳಿಗೆ ಸ್ವಲ್ಪ ದುಡ್ಡು ಕೊಟ್ಟು ತನ್ನ ಗೇರೇಜಿನಲ್ಲಿಟ್ಟು ಚಲಚಿತ್ರ ಕಂಪೆನಿಗಳಿಗೆ ಬಾಡಿಗೆಗೆ ಕೊಡುವುದು ಇವನ ಕಸಬಾಗಿ ಹೋಯಿತು.

ಇವನ ಗೇರೇಜಿನಲ್ಲಿ ೧೯೧೨ರ ಒಂದು ಫೋರ್ಡ್ ಮೋಟಾರ್ ಕಾರಿದೆ. ೧೯೧೦ರ ರಿನಾಲ್ಟ್ ಕಾರನ್ನು "ಮೆಡಮಾಯ್ಸಿಲ್ ಡಾಕ್ಟರ್" ಎಂಬ ಚಿತ್ರದಲ್ಲಿ ನೀವು ಕಾಣಬಹುದು. ಕಾರು ಹೊಸತಾಗಿದ್ದಾಗ ಅದರ ಕ್ರಯ ೨೦೦೦ ಪವನುಗಳಾಗಿದ್ದರೂ ಒಂದು ಸಂಕದ ಮೇಲೆ ಒಮ್ಮೆ ಕೊಂಡೊಯ್ಯಲು ಫಿಲ್ಮ್ ಕಂಪೆನಿಯಿಂದ ಅವನು ೨೦೦೦ ಪವನುಗಳನ್ನು ತೆಗೆದುಕೊಂಡಿದ್ದಾನೆ. ಒಳ್ಳೆಯ ಸಂಪಾದನೆಯಲ್ಲವೆ?

∴

**ಚಿನ್ನ ಬೆಳ್ಳಿಗಳ ಪದಕಗಳಿಲ್ಲ.**

ಜರ್ಮನಿಯಲ್ಲಿ ಯಾವ ನಾಝಿ ಅಧಿಕಾರಿಯೂ ಚಿನ್ನ ಬೆಳ್ಳಿಗಳ ಪದಕಗಳನ್ನು ಧರಿಸ ಬಾರದೆಂಬ ನಿಯಮವಾಗಿದೆ. ಅಧಿಕಾರಿಗಳು ಇಮಿಟೇಶನ್ ಮೆಡಲುಗಳನ್ನು ಧರಿಸಬೇಕು. ಚಿನ್ನ ಮತ್ತು ಬೆಳ್ಳಿಯ ಪದಕಗಳು ಯುದ್ಧಕ್ಕಾಗಿ ಮಾಡಲ್ಪಟ್ಟವೆ.

∴

**೨೮೦೦ ಕುರಿಗಳಿಗೆ ಒಂದು ಪವನು.**

ಆಸ್ಟ್ರೇಲಿಯದ ರೈತನೊಬ್ಬ ಸಂತೋಷದಿಂದ ಒಂದು ವಹಿವಾಟನ್ನು ಮಾಡಿದ್ದಾನೆ. ಅದರ ವಿವರವು ಹೀಗಿದೆ:

ಪೂರ್ವಾಸ್ಟ್ರೇಲಿಯದಲ್ಲಿ ಕ್ಷಾಮದಿಂದಾಗಿ ಕುರಿಗಳು ನೊಣಗಳಂತೆ ಸಾಯಲಾರಂಭಿಸಿದುವು. ಒಬ್ಬ ಕುರಿ ಸಾಹುಕಾರನು ತನ್ನ ಕುರಿಗಳು ಸಿಕ್ಕಾಬಟ್ಟೆ ಸಾಯುತ್ತಿರುವುದನ್ನು ಕಂಡು ಸುಮ್ಮನೆ ನಷ್ಟವಾಗುವುದರಿಂದ ಯಾರಿಗಾದರೂ ಮಾರಿಬಿಡುವುದೊಳ್ಳೆಯದೆಂದು ಭಾವಿಸಿ ಬಹಳ ಕಡಿಮೆ ಕ್ರಯಕ್ಕೆ ಮಾರುತ್ತೇನೆಂದು ಹೇಳಿದ. ಕುರಿಗಳು ಸಾಯುತ್ತಿರುವ ಕಾಲದಲ್ಲಿ ಕೊಂಡುಕೊಳ್ಳುವವರಾರು? ತನ್ನ ನೆರೆಮನೆಯನೊಬ್ಬನಿಗೆ ಒಂದು ಪವನಿಗೆ ೨೮೦೦ ಕುರಿಗಳನ್ನು ಮಾರಿಯೇ ಬಿಟ್ಟ.

ನೆರೆಮನೆಯವನ ಅದೃಷ್ಟ ಚೆನ್ನಾಗಿತ್ತು. ಕ್ಷಾಮವಿದ್ದರೂ ೨೫೦ ಕುರಿಗಳು ಮಾತ್ರ ಸತ್ತವು. ಕೂಡಲೆ ಧಾರಾಳ ಮಳೆ ಸುರಿಯಿತು. ೨೫೫೦ ಕುರಿಗಳು ಈಗಲೂ ಜೀವಂತವಾಗಿವೆ!

∴

**ಗುಟ್ಟು ರಟ್ಟಾಯಿತು.**

೧೯೦೩ರ ಕತೆಯಿದು! ಸ್ವಿಝರ್ ಲೇಂಡಿನ ಜ್ಯಾಕ್ ಆಕರ್‌ಮನ್ ಎಂಬವನು ಪ್ರತಿ ಸಾಯಂಕಾಲ ತನ್ನ ಪ್ರೇಮಿಕೆಯ ಮನೆಗೆ ಬೈಸಿಕಲಿನಲ್ಲಿ ಹೋಗುವುದಿತ್ತು. ಒಂದು ದಿನ ತನ್ನ ಬೈಸಿಕಲನ್ನು ಹೊರಗಿಟ್ಟು ಅವನು ಒಳಗೆ ಹೋಗಿ ತನ್ನ ಕೆಲಸವನ್ನು ತೀರಿಸಿ ಹೊರಗೆ ಬರುವಾಗ ಬೈಸಿಕಲ್ ಕಾಣೆ. ಪಾಪ ಮನೆಗೆ ಹೋಗಬೇಕಾದರೆ ಗಾಡಿಗೆ ಒಂದು ಶಿಲಿಂಗ್ ಅವನು ಖರ್ಚು ಮಾಡಬೇಕಾಯಿತು. ಎಷ್ಟು ಯತ್ನಿಸಿದರೂ ಅವನಿಗೆ ಸೈಕಲ್ ಅಡಗಿಸಿಟ್ಟವನ ಪತ್ತೆಯಾಗಲಿಲ್ಲ.

ವರುಷಗಳುರುಳಿದುವು. ಜ್ಯಾಕ್ ಕೆಲಿಫೋರ್ನಿಯದಲ್ಲಿ ಒಂದು ಹೊಟೆಲನ್ನಿಟ್ಟನು. ಅದೊಂದು ಸಂಜೆ ಹೊಟೆಲಿನವನೂ ಒಬ್ಬ ಸ್ವಿಸ್ ಯುವಕನೂ ತಮ್ಮ ಮಾತೃಭೂಮಿಯ ಕುರಿತು ಮಾತಾಡ ತೊಡಗಿದರು. ಎಲ್ಲಾ ವಿಚಾರಗಳನ್ನು ಚರ್ಚಿಸುವಾಗ ಸೈಕಲನ್ನು ಅಂದು ಅಡಗಿಸಿಟ್ಟವನು ಆ ಯುವಕನೆಂದು ಜ್ಯಾಕನಿಗೆ ಗೊತ್ತಾಯಿತು!

∴

## ನಟಿಯರ ದೀರ್ಘಜೀವನ.

ಸಿನೆಮಾ ನಟರು ಇತರರಿಗಿಂತ ಅಧಿಕ ಕಾಲ ಬಾಳುವರೆಂಬ ಒಂದು ಶೋಧನೆಯನ್ನು ಡಾ। ಲಾರೆನ್ಸ್ ಸ್ಪಾಂಗಡ್'ರ್ ಎಂಬವರು ಮಾಡಿದ್ದಾರೆ. ಈ ಡಾಕ್ಟರರು ಹೊಲಿವುಡ್ಡಿನ ಒಂದು ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿದ್ದಾರೆ.

"ಸಿನೆಮಾ ಅಭಿನಯಕಾರರ ಜೀವನವನ್ನು ನಾನು ಪರಿಶೋಧಿಸಿದ ಫಲಿತಾಂಶವಾಗಿ ಕೀರ್ತಿವೆತ್ತ ನಟನಟಿಯರು ಇತರರಿಗಿಂತ ೧೧ ವರ್ಷಗಳಷ್ಟು ಹೆಚ್ಚು ಕಾಲ ಬದುಕುತ್ತಾರೆ" ಎಂದವರು ಹೇಳಿದ್ದಾರೆ.

"ಇದರಲ್ಲೇನೂ ಆಶ್ಚರ್ಯವಿಲ್ಲ. ಸಾಮಾನ್ಯ ಮನುಷ್ಯರಿಗಿಂತ ಹೆಚ್ಚು ಜಾಗ್ರತೆಯಿಂದ ನಟರು ತಮ್ಮ ಶರೀರವನ್ನು ಪೋಷಿಸುತ್ತಾರೆ. ಇದಕ್ಕೆ ಮೂಲ ಕಾರಣವಾವುದೆಂದರೆ ಅವರ ಶರೀರ ಸೌಂದರ್ಯವನ್ನು ಅವರು ರಕ್ಷಿಸಿಕೊಂಡಿರಬೇಕಾಗಿರುವುದು. ಶರೀರ ರಕ್ಷಣೆಯಿಂದ ಮಾನಸಿಕ ಸ್ವಾಸ್ಥ್ಯವೂ ದೊರಕುತ್ತದೆ.

"ಅವರು ಬಹಳ ಪರಿಶ್ರಮವಹಿಸಿ ದುಡಿಯುತ್ತಾರೆ. ಇದರಿಂದ ಅವರ ದೇಹಕ್ಕೆ ಪ್ರಯೋಜನವಿದೆ. ಅವರು ವಿಶ್ರಮಿಸುವಾಗ ಧಾರಾಳ ಸೂರ್ಯ ರಶ್ಮಿಯನ್ನೂ, ಶುದ್ಧ ಗಾಳಿಯನ್ನೂ ಸೇವಿಸುತ್ತಾರೆ."

ನಿಮಿಷವೊಂದಕ್ಕೆ ೨೦೦ ಪವನುಗಳು ಸಿಗುವಾಗ ತಮ್ಮ ದೇಹಗಳ ಕುರಿತು ಇಷ್ಟು ಜಾಗ್ರತೆಯನ್ನು ತೆಗೆದುಕೊಳ್ಳುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

## ಇಟಲಿಯು ಅಪ್ಪಂದಿರಿಗೆ ಹಣ ಕೊಡುತ್ತಿದೆ.

ಸ್ವಲ್ಪ ಸಮಯದ ಹಿಂದೆ ಸೀನರ್ ಮುಸೋಲಿನಿಗೆ ಫ್ಯಾಸಿಸ್ಟ್ ಪ್ರಜೆಗಳು ಇಟಲಿಯಲ್ಲಿ ಕಡಿಮೆಯಾದರೆಂಬ ಭಯವುಂಟಾಯಿತು. "ತುಂಬಾ ಮಕ್ಕಳನ್ನು ಹುಟ್ಟಿಸಿರಿ" ಎಂಬ ಆಜ್ಞೆಯು ಎಲ್ಲೆಡೆಗಳಲ್ಲಿಯೂ ಹಬ್ಬಿತು. ಹೆಚ್ಚು ಮಕ್ಕಳನ್ನು ಹುಟ್ಟಿಸಿದವರಿಗೆ ಇಟಲಿಯ ಸರಕಾರವು ಹಣ ಕೊಡಲಾರಂಭಿಸಿತು.

ಇಷ್ಟರ ತನಕ ಮುಸ್ಸೋಲಿನಿಯ ಯೋಜನೆಯು ಯಶಸ್ವಿಯಾಗಿ ನಡೆದಿದೆ. ಇತ್ತೀಚೆಗಿನ ವರದಿಯನ್ನು ನೋಡುವಾಗ ಜನಸಂಖ್ಯೆಯು ಅಧಿಕವಾಗಿದೆ. ಇಟಲಿಯ ಸರಕಾರವು ಹೆಚ್ಚು ಮಕ್ಕಳನ್ನು ಹುಟ್ಟಿಸಿರುವುದಕ್ಕೆ ೪,೫೦೦,೦೦೦ ಪವನುಗಳನ್ನು ಕೊಟ್ಟಿದೆ.

---

(೩೧ನೇ ಪುಟದಿಂದ)

**ಪಾನಿಯನನ ಪರಿಮಳ ಶೋಧೆಯ ಯಂತ್ರವು ಕೆಲಸ ಮಾಡಲಾರಂಭಿಸಿತ್ತು!**

ಕೂಡಲೆ ಅತ್ಲಾಂತಿಕ ಸಾಗರದ ದೃಶ್ಯವು ಕಣ್ಣೆದುರು ಬಂತು. ಬೆಸ್ತರು ತುಂಬಾ ಮೀನುಗಳನ್ನು ದೋಣಿಗಳೊಳಗೆ ರಾಶಿ ಹಾಕಿದ ದೃಶ್ಯವು ಕಂಡಿತು. ಆಧುನಿಕ ಫೊಟೊಗ್ರಾಫಿಯ ಪರಾಕಾಷ್ಠತೆಯು ಆ ದೃಶ್ಯದಲ್ಲಡಕವಾಗಿತ್ತು.

"ನೀವೆಲ್ಲರೂ ಚಿತ್ರವನ್ನು ಕಂಡು ಆನಂದ ಪಟ್ಟಿರಬಹುದು" ಎಂದು ಹೇಳಿದನು ಪಾನ್ಯನ್ "ಈಗ ಆ ಚಿತ್ರದಲ್ಲಿರುವ ವಸ್ತುಗಳ ವಾಸನೆಯನ್ನು ತಿಳಿಯುವಿರಿ."

## ಇದೊ, ಸಮುದ್ರದ ವಾಸನೆ!

ಕೂಡಲೆ ಕಂಡಿತು ಭೋರ್ಗರೆಯುವ ಅಂತ್ಲಾಂತಿಕ್ ಸಾಗರ, ಮೀನನ್ನು ತುಂಬಿರುವ ದೋಣಿ. ಈ ದೃಶ್ಯಗಳು ಪುನಃ ತೋರಿಸಲ್ಪಟ್ಟವು. ಆದರೆ ಈ ಬಾರಿ ದೃಶ್ಯ, ಶಬ್ದಗಳು ಮಾತ್ರವಲ್ಲ ಜನರು ವಾಸನೆಯನ್ನೂ ತಿಳಿದುಕೊಂಡರು. ಅಲೆಗಳ ಮೇಲೆ ಅಲೆಗಳು ಉರುಳುತ್ತಿದ್ದಾಗ ಪಾನ್ಯನನ ಅತಿಥಿಗಳು ಸಮುದ್ರದ ನೀರಿನ ವಾಸನೆಯನ್ನು ಆಘ್ರಾಣಿಸಿದರು.

ದೊಡ್ಡದೊಂದು ಮೀನು ಬಲೆಯಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಹಾರಾಡುತ್ತಿತ್ತು.

**ಕೂಡಲೆ ಮೀನಿನ ವಾಸನೆಯು ಬರಲಾರಂಭಿಸಿತು. ಅವರು ನೋಡುತ್ತಿದ್ದ ದೃಶ್ಯವು ಸೃಷ್ಟಿಯ ಪ್ರತಿರೂಪವಾಯಿತು.**

ಈ ಹೊಸ ಶೋಧೆಯ ಯಶಸ್ಸಿನಿಂದ ಮಹತ್ವದ ಕೆಲಸಗಳನ್ನು ಮಾಡಬಹುದಾಗಿದೆ. ಅಸ್ವಾಭಾವಿಕತೆಯು ಮುಂದಿನ ಚಿತ್ರಗಳಲ್ಲಿ ಎಂದೂ ಇರಲಾರದು. ಥಿಯೇಟರಿನೊಳಗೆ ಕುಳಿತವರು ಅತ್ಲಾಂತಿಕ ಸಾಗರದ ಬಳಿಯಲ್ಲಿದ್ದಂತೆ ಭಾವಿಸುವರು. ಇದರಿಂದ ಚಿತ್ರಗಳು ಯಥಾರ್ಥವಾಗುವುವು,

ಹೇಗಿದ್ದರೂ ಬೇಗನೆ ಚಲನ ಚಿತ್ರಗಳಿಗೆ ವಾಸನೆಯು ಸೇರಿಸಲ್ಪಡುವಂತಿಲ್ಲ. ಈಗ ಪಾನಿಯನನ ಮುಂದಿರುವ ಏಕಮಾತ್ರ ಸಮಸ್ಯೆಯೆಂದರೆ ಒಂದು ವಾಸನೆಯನ್ನು ಹೋಗಲಾಡಿಸಿ ಕೂಡಲೆ ಇನ್ನೊಂದನ್ನು ಹರಡಿಸುವುದು ಹೇಗೆಂದಾಗಿದೆ. ಸ್ವಲ್ಪ ಸಮಯದಲ್ಲಿಯೇ ನಾವು "ಟಾಕಿ"ಗೆ ಹೋಗುವ ಎಂದು ಹೇಳುವ ಬದಲು "ಸ್ಮೆಲ್ಲಿ"ಗೆ ಹೋಗೋಣವೇ ಎಂದು ಕೇಳಬಹುದು.

# ಮೂಲೆ-ಮೂಲೆಗಳಿಂದ

## ಧಾರವಾಡದ ಕನ್ನಡ ಹಬ್ಬ

ಧಾರವಾಡದಲ್ಲಿ ತಾ ೨೪—೯—೩೮ರಿಂದ ತಾ. ೪—೧೦—೧೯೩೮ ರ ವರೆಗೆ ಕನ್ನಡ ಹಬ್ಬವು ಆಚರಿಸಲ್ಪಡುವುದೆಂದೂ, ಹಬ್ಬದಲ್ಲಿ ಖಾದಿ ಪ್ರದರ್ಶನ, ಸಾಹಿತ್ಯ ಗೋಷ್ಠಿ ಮೊದಲಾದುವುಗಳು ಜರಗುವುವೆಂದೂ ಈ ಹಬ್ಬಕ್ಕೆ ಶ್ರೀಗಳಾದ ಬೇಂದ್ರೆ, ಪ್ರೊ. ಗೋಕಾಕ ಮೊದಲಾದವರು ಆಮಂತ್ರಿಸಲ್ಪಟ್ಟಿರುವರೆಂದೂ ಹಬ್ಬವನ್ನೇರ್ಪಡಿಸಿರುವವರು ತಿಳಿಸುತ್ತಾರೆ.



## ಪುತ್ತೂರಿನ ದಸರಾ ಮಹೋತ್ಸವ.

ಪುತ್ತೂರು (ದ. ಕ.) ಹಯರೆಲಿಮೆಂಟರಿ ಶಾಲೆಯಲ್ಲಿ ತಾ. ೨೪—೯—೩೮ರಿಂದ ತಾ. ೩—೧೦ ೩೮ರ ತನಕ ದಸರಾ ಮಹೋತ್ಸವವು ಜರಗಿಸಲ್ಪಡುವುದೆಂದೂ ಶ್ರೀಗಳಾದ ಬಿ. ಎಂ. ಶ್ರೀಕಂಠಯ್ಯ, ಬೆಳಗಾಂವಿ ರಾಮಚಂದ್ರ ರಾವ್, ಡಾ| ಎ. ಎ. ಬೇಕ್, ಮೊದಲಾದವರು ವಿವಿಧ ದಿನಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸುವರೆಂದೂ, ಮಹೋತ್ಸವ ಕಾಲದಲ್ಲಿ ಹಲವು ತರದ ಸ್ಪರ್ಧೆಗಳು ನಡೆಯುವುವೆಂದೂ ಸಂಬಂಧಪಟ್ಟವರು ತಿಳಿಸುತ್ತಾರೆ.



## ಉಡುಪಿ ಮುನ್ಸಿಪಲ್ ಚುನಾವಣೆ.

ಉಮೇದ್ವಾರಿಗಳಿಂದ ನೋಮಿನೇಶನು ತಾ. ೨೬ ರಂದು ಬೆಳಿಗ್ಗೆ ೧೦ ತಾಸಿನಿಂದ ಸಾಯಂಕಾಲ ೪ ತಾಸಿನ ವರೆಗೆ ಸ್ವೀಕರಿಸಲ್ಪಡುವುದು. ಚುನಾವಣೆ ತಾ. ೧೯-೧೦-೧೯೩೮ ರಂದು ಬೆಳಿಗ್ಗೆ ೭ ತಾಸಿನಿಂದ ೧೨ರ ತನಕ ಅಪರಾಹ್ನ ೧ರಿಂದ ೬ರ ತನಕ. ಮತಗಣನೆ: ತಾ. ೨೦-೧೦-೧೯೩೮ ರಂದು ಪೂರ್ವಾಹ್ನ ೮ ತಾಸಿಗೆ ಪ್ರಾರಂಭವೆಂದು ಚುನಾವಣಾಧಿಕಾರಿಗಳು ತಿಳಿಸುತ್ತಾರೆ.

### ಗಾಂಧಿ ಜಯಂತಿ

**೭೦ನೆ ಜನ್ಮದಿನೋತ್ಸವ**

ಮಹಾತ್ಮಾ ಗಾಂಧಿಯವರ ೭೦ನೆ ಜಯಂತಿಯು ತಾ. ೨೧ರಿಂದ ಪ್ರಾರಂಭವಾಗಿ ಅಕ್ಟೋಬರ. ೨ರ ತನಕ ಅಖಿಲ ಭಾರತದಲ್ಲಿ ಜರಗುವುದು. ಜಯಂತಿ ಕಾಲದಲ್ಲಿ ಗಾಂಧಿಜಿಯರಿಗೆ ಪ್ರಿಯವಾದ ಖಾದಿಯನ್ನು ಸರ್ವರೂ ಕೊಂಡುಕೊಳ್ಳಬೇಕೆಂದು ಕ. ಪ್ರಾಂ. ಕಾಂಗ್ರೆಸ್ ಕಮಿಟಿಯವರು ಬಿನ್ನವಿಸಿಕೊಂಡಿದ್ದಾರೆ.



# ಷೋಕೀ ಜಗತ್ತಿನ ಝೋಕೀ ಪುರಾಣ



## ನಗ್ನ ರಾಜ್ಯ.

ಓದಿದೊಡನೆಯೇ ಆಶ್ಚರ್ಯ ಪಡುವ ಆವಶ್ಯಕತೆಯಿಲ್ಲ. ಇದೇನೂ ಕಲ್ಪಿತ ಕತೆಯಲ್ಲ. ಫ್ರಾರ್ ಎಂಬಲ್ಲಿ ನಡೆದ ವಿಷಯ. ಅದೊಂದು ಸುಪ್ರಭಾತದಲ್ಲಿ ಅಲ್ಲಿಯ ನವ ಯುವಕರು ಒಂದುಗೂಡಿ ನಗ್ನ ರಾಜ್ಯದ ಅಸ್ತಿವಾರವನ್ನು ಹಾಕಿಯೇ ಬಿಟ್ಟರು. ನದಿಯ ತೀರದಲ್ಲಿ ಚಿಕ್ಕದೊಂದು ವಸಾಹತನ್ನು ಅವರು ಆರಿಸಿಕೊಂಡಿದ್ದಾರೆ. ಎಲ್ಲರಿಗೂ ಸ್ವಾಗತವಿದೆ. ಹಣ ಕೊಡಬೇಕಾಗಿಲ್ಲ. ಇರುವ ಏಕ ಮಾತ್ರ ಶರ್ತವೆಂದರೆ ಸಂಘದ ನಿಯಮಗಳನ್ನು ಪಾಲಿಸುವುದು ಮಾತ್ರ. ಈ ಸಂಘದ ಮುಖ್ಯ ಧ್ಯೇಯವೊಂದಿದೆ. ಇತ್ತೀಚೆಗೆ ಮನುಷ್ಯ ಜೀವಿಗಳಲ್ಲಿ ಕಾಮುಕತೆಯು ಹೆಚ್ಚುತ್ತಿದೆಯಂತೆ. ಪ್ರಾಣಿಗಳಿಗಿಂತ ಹೆಚ್ಚಿನ ಅನಾಗರಿಕತೆಯು ಮನುಷ್ಯರಲ್ಲುಂಟಾಗಲಾರಂಭಿಸಿದೆಯಂತೆ. ಸ್ತ್ರೀ ಪುರುಷರು ಸದಾ ನಗ್ನವಾಗಿರುವುದರಿಂದ ಗೋಪ್ಯಾಂಗಗಳೆಂಬುವು ಇಲ್ಲದೆ ಕಾಮ ದೃಷ್ಟಿಯು ಹೋಗಿ, ಭೋಗಾಭಿಲಾಷೆಯು ಕಡೆಗಣಿಸಲ್ಪಡುವುದೆಂದು ಆ ಯುವಕರ ಅಭಿಪ್ರಾಯವಂತೆ. ಇದರಿಂದಾಗಿ ಜಗತ್ತಿನ ನೈತಿಕ ಹಾಗೂ ಆಧ್ಯಾತ್ಮಿಕ ಪರಿಸ್ಥಿತಿಯು ಸುಧಾರಿಸುವುದಂತೆ. ಹೀಗಾಗುವುದಿದ್ದರೆ ಇತರ ಕಡೆಗಳ ಯುವಕರು ಈ ಕಡೆಗೆ ತಮ್ಮ ಲಕ್ಷ್ಯವನ್ನು ಅದೇಕೆ ಹರಿಸಬಾರದೆಂಬುದು ಒಂದು ಗಣನೀಯ ಪ್ರಶ್ನೆಯಾಗಿದೆ.

ooo

## ಸಾವಿನ ತೆರಿಗೆ.

ಎಲ್ಲದರ ಮೇಲೂ ತೆರಿಗೆಯಿದೆ. ಮತ್ತು ಸಾವಿಗೂ ತೆರಿಗೆಯೇ ಎಂದು ಥಕ್ಕನೆ ಪ್ರಶ್ನಿಸಬೇಡಿ. ಒಂದು ವೇಳೆ ಹಾಗೆ ಪ್ರಶ್ನಿಸಿದರೆ "ಹೌದು" ಎಂದದಕ್ಕೆ ಉತ್ತರ. ಕೇಂದ್ರ ಸರಕಾರದ ಮಿ| ಎ. ಎಚ್. ಲಾಯಡ್‌ರವರು ಸಾವಿನ ತೆರಿಗೆಯನ್ನು ಭಾರತದಲ್ಲಿ ಜಾರಿಗೆ ತರಬಹುದೇ ಎಂದು ವಿಚಾರಣೆಗಳನ್ನು ನಡಿಸುತ್ತಿದ್ದಾರೆ.

ನನ್ನ ಅಭಿಪ್ರಾಯದಲ್ಲಿ ಈ ತೆರಿಗೆಯನ್ನು ಹೊರಿಸುವುದು ಸಂತೋಷದ ಸಂಗತಿ. ಪ್ರತಿಯೊಂದು ಸಾವಿಗೆ ಹತ್ತು ರೂಪಾಯಿ ತೆರಿಗೆ! ರಾಷ್ಟ್ರದಲ್ಲಿ ಹಣವು ಕಡಿಮೆಯಾಗಿರುವಾಗ ಸಾಯುವವರ ಮೇಲೆ ಹತ್ತು ರೂಪಾಯಿ ತೆರಿಗೆ ಹೊರಿಸಿದರೆ ಯಾವ ಅನ್ಯಾಯವೂ ಆಗುವಂತಿಲ್ಲ. ಯಾವನಿಗಾದರೂ ತನ್ನ ಕೊನೆಯ ತೆರಿಗೆಯನ್ನು ಕೊಡುವುದಕ್ಕೆ ಮರುಕವಿದೆಯೆ?

ooo

## ಕಾಯಕಲ್ಪ!

ಈ ತೆರಿಗೆ ಬಂದೊಡನೆಯೇ ಹೆಚ್ಚಿನವರು ಕಾಯಕಲ್ಪ ಚಿಕಿತ್ಸೆಯನ್ನು ಮಾಡಿಸಿ ಬಹುಕಾಲ ಬದುಕಲೆತ್ನಿಸ ಬಹುದು. ಆದಾಯದ ಇಂತಿಷ್ಟೇ ಅಂಶವು ಸರಕಾರಕ್ಕೆ ಸಲ್ಲಬೇಕೆಂಬ ನಿಯಮವಿರುವುದರಿಂದ ದೊಡ್ಡವರು ದೀರ್ಘ ಜೀವಿತದ ರಹಸ್ಯಗಳನ್ನು ಕಂಡು ಹಿಡಿಸಿ ಆದಷ್ಟು ಕಾಲ ಬದುಕಲೆತ್ನಿಸ ಬಹುದು. ಆದುದರಿಂದ ಬರೀ ಹತ್ತು ರೂಪಾಯಿಗಳನ್ನು ಪ್ರತಿಯೊಬ್ಬರ ಮೇಲೂ ಹೊರಿಸುವ ಏರ್ಪಾಡು ಮಾಡಿದರೆ ಜನರು ಬಹುಕಾಲ ಬಾಳಲಾಶಿಸಲಿಕ್ಕಿಲ್ಲ.

ooo

## ಚಳವಳ.

ಸಾವಿನ ತೆರಿಗೆ ಜಾರಿಗೆ ಬಂದೊಡನೆಯೇ ಸರಕಾರೀ ನೌಕರರು ತಮ್ಮ ಉದ್ಯೋಗದ ಅವಧಿಯನ್ನು ಹೆಚ್ಚಿಸಬೇಕೆನ್ನಬಹುದು. ಆದರೆ ಈ ತೊಂದರೆಯನ್ನು ಹೇಗಾದರೂ ನಿಲ್ಲಿಸಬಹುದು. ಸರಕಾರೀ ಉದ್ಯೋಗಸ್ಥರು ತೆರಿಗೆ ಕೊಡದೆ ಸಾಯಬಹುದೆಂಬ ಒಂದು ನಿಯಮವನ್ನು ಮಾಡಿಬಿಟ್ಟರೆ ಅವರೂ, ಜನತೆಯೂ ಈ ಕುರಿತು ಚಳವಳ ನಡೆಸಲಿಕ್ಕಿಲ್ಲ. ಮುಂದೆ ಮೃತ್ಯೂತ್ಸುಕರ ಸಂಘಗಳನ್ನು ಸಮತಾವಾದಿಗಳು ಸ್ಥಾಪಿಸ ಬಹುದೇ ಎಂಬೊಂದು ಸಂಶಯವು ಮಾತ್ರ ಹುಟ್ಟಲಾರಂಭಿಸಿದೆ.

ooo

## "ಸಾಕೇ? ಸಾಕೇ?"

ಸರ್ ಜೇಮ್ಸ್ ಗ್ರಿಗ್ಗರು ಬ್ರಿಟಿ

ಷ್ ಸರಕಾರದೊಡನೆ ಮಾಡಿದ ಜಗಳವನ್ನು ಶ್ರೀ. ಭೂಲಾಭಾಯಿ ದೇಸಾಯಿಯವರು ಈ ರೀತಿ ಚಿತ್ರಿಸಿದರು: ಗಂಡಸರು ತಮ್ಮ ಹೆಂಡಂದಿರಿಗೆ ಬೆದರಿಸುತ್ತಾರೆಂಬ ಪ್ರತೀತಿಯಿರುವುದಿದ್ದರೂ, ತಮ್ಮ ಮನೆಗಳಲ್ಲಿ ಹೆಂಡದಿರು ಹೊಡೆಯುವಾಗ ಹೊರಗಿನವರಿಗೆ ತಾವು ಹೊಡೆಯುವುದೆಂಬ ಅಭಿಪ್ರಾಯವುಂಟುಮಾಡುವುದಕ್ಕಾಗಿ "ಸಾಕೇ ಸಾಕೇ" ಎಂದು ಹೇಳುವುದುಂಟು. ಇದರಂತೆಯೇ ಸರ್ ಜೇಮ್ಸ್ ಗ್ರಿಗ್ಗರ ಜಗಳವೆಂದು ದೇಸಾಯಿಯವರಂದರು. ಎಸೆಂಬ್ಲಿಯಲ್ಲಿ ಕಥೆ ಹೇಳುವ ಮತ್ತೊಬ್ಬ ಸದಸ್ಯರಿವರು.

೦೦೦

## ಪುರೋಹಿತರಿಲ್ಲ!

ಪುರೋಹಿತರಿಲ್ಲದಿರುವುದರಿಂದ ರಷ್ಯದಲ್ಲಿರುವ ಮೋಸ್ಕೋ ನಗರದ ಇಗರ್ಜಿಯನ್ನು ಮುಚ್ಚಿರುವರಂತೆ.

ಪರಮಾತ್ಮನಿಗೆ ಭಾಗ್ಯವಿಲ್ಲದಿದ್ದರೆ ಯಾರೇನು ಮಾಡಬೇಕು?

೦೦೦



"ಈ ಕೊಳಲಿಗೇನು ಕರೀದಿ? ಸುಮ್ಮಗೆ ಬಾಯಿಗೆ ಬಂದ ಕ್ರಯ ಹೇಳಬೇಡ ತಿಳಿತೆ?"

"ಆಯ್ತು ಸ್ವಾಮಿ, ನಿಮ್ಮಂಥೋರಿಗೆ ನಾನು ಹಾಗೆಲ್ಲಾ ಹೇಳೋದುಂಟೆ? ಎಷ್ಟಂದ್ರೂ ನೀವು ಶಾಸ್ತ್ರಿಗಳಲ್ವೆ?"

"ಮತ್ತೆ ಕರೀದಿ ಹೇಳ್ಬಿಡಯ್ಯಾ"

"ಹೆಚ್ಚಿಲ್ಲ ಸ್ವಾಮಿ' ಎರಡೂವರೆ ರೂಪಾಯಿ ಮಾತ್ರ. ಮಧ್ಯಾಹ್ನ ನಮ್ಮ ವೀಣೆ ಸಿದ್ದಯ್ಯನವರು ಎರಡು ಮುಕ್ಕಾಲು ರೂಪಾಯಿಗೊಂದು ಕೊಂಡು ಹೋದ್ರು."

"ಶಿವ ಶಿವಾ! ಏನೋ ಕಲಿಯುಗದ ಬೆಲೆಯೋ ಇದು? ನಮ್ಮಾಕೆ ನಿನ್ನೆ ಸಂತೆಯಿಂದ ಒಲೆ ಉರಿಸುವ ಇಂಥ ವಾಟಿಯನ್ನು ಅರ್ಧಾಣೆಗೆ ತಂದಿದ್ದಾಳೆ."

## ಸಾಧುಗಳ ಮೇಲೆ ನಿಷೇಧ.

ಹೈದರಾಬಾದಿನಲ್ಲಿ ಜೈನ ಸಾಧುಗಳು ನಗ್ನರಾಗಿ ನಡೆಯ ಬಾರದೆಂಬ ನಿಯಮವನ್ನು ತೆಗೆದು ಹಾಕಬೇಕೆಂದು ಅನೇಕರು ಸರಕಾರದೊಡನೆ ಬಿನ್ನವಿಸಿಕೊಂಡರಂತೆ. ಈ ಬಿನ್ನಹವು ಮನ್ನಿಸಲ್ಪಟ್ಟರೆ ಇತರರು ಅನುಸರಿಸುವರೆಂದು ನಿರೀಕ್ಷಿಸಬಹುದೆ?

೦೦೦

## ಮರ ನಿವಾಸಿಗಳು!

ಮರಗಳಲ್ಲಿ ವಾಸಿಸುವುದು ಕಾಡು ಜನರು ಮಾತ್ರ ಎಂಬ ನಂಬುಗೆಯಲ್ಲಿ ಸ್ವಲ್ಪ ಬದಲಾವಣೆಯಾಗಬೇಕಾಗಿದೆ. ಕಾರಣ— ಮುಂಬಯಿಯ ಎಸ್ಪ್ಲೆನೇಡ್ ರೋಡಿನ ಉತ್ತರ ಭಾಗದಲ್ಲ ಮರಗಳು ತಮ್ಮ ಕೊಂಬೆಗಳನ್ನು ವಿಶಾಲವಾಗಿ ಹರಡಿರುವುದರಿಂದ ಈಗಾಗಲೇ "ಮರ ನಿವಾಸಿಗಳು ತಮ್ಮ ಮನೆಯನ್ನು ಕಟ್ಟಲು ಪ್ರಾರಂಭಿಸಿರುವರು. ಈ ಮನೆಗಳು ಒಬ್ಬೊಬ್ಬರಿಗೆ ಧಾರಾಳ ಸಾಕಾಗುತ್ತವೆಯಂತೆ. ಈ "ವಕ್ಕಲು"ಗಳ ಮೇಲೆ ಯಾವ ತರದ ತೆರಿಗೆಯೂ ಹೊರಿಸಲ್ಪಡುವುದಿಲ್ಲ. ಮರಗಳು ಧನಿಗಳಾದುದರಿಂದ ಬಾಡಿಗೆ ಕೊಡುವ ಪ್ರಸಂಗವು ಇಷ್ಟರ ತನಕ ಉಂಟಾಗಲಿಲ್ಲವಂತೆ!

೦೦೦

## ಹುಬ್ಬಳ್ಳಿ ಚುನಾವಣೆ.

ಹುಬ್ಬಳ್ಳಿಯ ಮ್ಯುನಿಸಿಪಲ್ ಚುನಾವಣೆಯನ್ನು ಮುಂಬಯಿ ಸರಕಾರವು ಮಾರ್ಚ ೩೧ಕ್ಕೆ ಮುಂದರಿಸಿತು.

ಮುನಿಸಿಪಾಲಿಟಿಯು ಹೋಗಬೇಕೆಂದು ಚಳವಳ ನಡೆಸುವವರ ಮೊದಲನೆ ವಿಜಯವಿದು. ಚಳವಳಗಾರರಿಗೆ ಪೂರ್ಣ ವಿಜಯವಾಗಬಹುದೇ ಎಂಬೊಂದು ಸಂಶಯವು ಸಮಸ್ತ ಮುನ್ಸಿಪಾಲಿಟಿಯನ್ನು ಬಲವಾಗಿ ಪೀಡಿಸುತ್ತಿರಬಹುದು!

೦೦೦

## ಭೀಕರ ವ್ಯಾಧಿ.

ಅಸ್ಸಾಮಿನಲ್ಲಿ ಮಿಶ್ರಮಂತ್ರಿಮಂಡಲವನ್ನು ಕಾಂಗ್ರೆಸ್ ಮಾಡಿರುವುದರಿಂದ ಅದೇ ವ್ಯಾಧಿಯು ಪಂಜಾಬಿಗೂ ಬರುವುದೇ ಎಂಬ ಭಯವು ಸರ್. ಸಿಕಂದರ ಹಯಾತ್ ಖಾನರಿಗೂ ಮಿ। ಜಿನ್ನರಿಗೂ ಉಂಟಾಗಿದೆಯಂತೆ ಸರಿಯಲ್ಲವೇ?



# ರಾಮುನ ದಿನಚರಿ ಡೈರಿ



ನಾನು ಕುಳಿತಿರುವ ಮೋಟಾರ್ ಬಸ್ಸಿನೆದುರುನಲ್ಲಿರುವವರ ಮುಖವನ್ನು ನೋಡಲಾಗುವುದಿಲ್ಲ. ಅವರಲ್ಲಿ ಮೂರು ಮಂದಿ ಶುದ್ಧ ಕೇಡಿಗಳು. ಬೆಕ್ಕು ಕುಡಿಯಲಿಕ್ಕೆಂದು ಇಟ್ಟಿರುವ ಹಾಲನ್ನು ಕದಿಯುವವರವು.

oOo

. . . ಊರಿನಲ್ಲಿ ಕಳ್ಳರು ತುಂಬಿ ಹೋಗಿದ್ದಾರೆ. ಪ್ರತಿಯೊಬ್ಬನೂ ಕದಿಯುವ ದೃಷ್ಟಿಯಲ್ಲಿಯೇ ನೋಡುತ್ತಿದ್ದಾನೆ.

oOo

ಪೇಟೆಯಲ್ಲಿ ಒಂದು ವಾರ್ತಾಪತ್ರಿಕೆಯನ್ನು ಒಂದಾಣೆ ಕೊಟ್ಟು ಕೊಂಡು ಕೊಂಡೆ. ಅದರಲ್ಲಿ ವಾರ್ತೆಯೇ ಇಲ್ಲ. ಊರು ತುಂಬಾ ಕಳ್ಳರಿದ್ದರೂ ಕೊಲೆಯ ವಾರ್ತೆಯೊಂದೂ ಪತ್ರಿಕೆಯಲ್ಲಿಲ್ಲದಿರುವುದು ಆಶ್ಚರ್ಯ. ಹಿಟ್ಲರ್ ಮುಸ್ಸೋಲಿನಿಯರು ಭಾಷಣ ಮಾಡಲಿಲ್ಲ.

oOo

ಓದಿದರೆ ಸಂತೋಷವಾಗುವಂಥ ಮಹಾನುಭಾವರು 'ಸ್ವರ್ಗಾಧೀನ'ರಾದ ಸುದ್ದಿ ಕೂಡಾ ಇಲ್ಲ.

oOo

ನನ್ನ ಆಫೀಸಿನ ಹಿಂದಿರುವ ಮನೆಯಲ್ಲಿ ಮಾಡುವ ಮೇಲೋಗರದ ಪರಿಮಳವು ಸಹಿಸಲಸಾಧ್ಯವಾಗಿದೆ. ಮುನಿಸಿಪಾಲಿಟಿಯವರು ಇದಕ್ಕೊಂದು ಕಾಯಿದೆಯನ್ನು ತರಬಾರದೇಕೆಂದು ನಾನು ಕೇಳಲಿಚ್ಛಿಸುತ್ತೇನೆ.

oOo

ನಮ್ಮ ಆಫೀಸಿನ ಲೇಡಿ ಟೈಪಿಸ್ಟ್ ಟ್ರ್ಯಾಪ್ ಮಾಡುವ ಬದಲು ಮೇನೇಜರರೊಡನೆ ನಗೆಯಾಡುತ್ತಿದ್ದಾಳೆ. ಈ ಸವಲತ್ತು ನನಗೂ ಏಕೆ ದೊರಕಬಾರದೆಂಬ ಭಾವನೆಯು ನನ್ನಲ್ಲುಂಟಾಗಿದೆ.

oOo

ನನ್ನ ಆಫೀಸಿನ ಕುರ್ಚಿಯು ಕಬ್ಬಿಣದಂತೆ ಗಟ್ಟಿಯಾಗಿದೆ. ಅದಕ್ಕೊಂದು ದಿಂಬು ಮಾಡಿಸಿ ಕೊಡಬೇಕೆಂದು ಕೇಳಿದೆ. ನಮ್ಮ ಆಫೀಸ್ ಮೆನೇಜರನ ಎದೆ ಕುರ್ಚಿಗಿಂತಲೂ ಗಟ್ಟಿಯಾಗಿದೆ.

oOo

ಶಾಯಿದವತಿಯಲ್ಲಿ ಮೀನುಗಳಂತೆ ಬಿಳಿ ವಸ್ತ್ರಗಳು ತೇಲಲಾರಂಭಿಸಿವೆ. ಲೇಖನಿಯ ತುದಿಗೆ ಅವುಗಳು ಸಿಕ್ಕಿಕೊಳ್ಳುವುದರಿಂದ ನಾನು ಗಾಳ ಹಾಕುತ್ತಿರುವೆನೋ ಎಂಬ ಅಭಿಪ್ರಾಯ ನನ್ನಲ್ಲುಂಟಾಗುತ್ತಿದೆ.

oOo

ನಾನು ಆಫೀಸ್ ಜವಾನನನ್ನು ಕರೆದರೆ ಅವನು-"ಲೇಡಿಟೈಪಿಸ್ಟ್ ಮತ್ತು ಮೆನೇಜರರು ಕೋಣೆಯೊಳಗಿದ್ದಾರೆ; ಬೇರೆ ಯಾರೂ ಬಾರದಂತೆ ಕಾಯುತ್ತಿದ್ದೇನೆ" ಎನ್ನುತ್ತಾನೆ.

oOo

ಆಫೀಸ್ ಗಡಿಯಾರದಲ್ಲಿ ನೋಡುವಾಗ ೧೦ ತಾಸಾದರೂ ಅದು ೨೫ ಬಾರಿ ಗಂಟೆ ಬಾರಿಸುತ್ತದೆ. ಪ್ರಾಯಶಃ ಇದು ಭೂಕಂಪದ ಚಿಹ್ನೆಯಾಗಿರಬಹುದೆಂದು ನನ್ನೂಹೆ.

oOo

ಮೆನೇಜರರು ೧೨ ತಾಸಾದರೂ ಬರಲಿಲ್ಲ. ಗಡಿಯಾರವು ೬೪ ಸಾರಿ ಗಂಟೆ ಬಾರಿಸಿತು. (ಆಫೀಸಿನ ಹೊರಗಿರುವವರು ಒಳಗೆ ಪೂಜೆಯಾಗುವುದೋ ಎಂದು ಭಾವಿಸಬಹುದು.)

oOo

ಬೇಸರವಾಗಿ ಎರಡು ಕುರ್ಚಿಗಳನ್ನು ಹತ್ತಿರವಿಟ್ಟು, ಕಸದ ಬುಟ್ಟಿಯ ಮೇಲೆ ಮೇಜಿನ ಬಟ್ಟೆಯನ್ನು ಹಾಸಿ ತಲೆದಿಂಬಾಗಿ ಉಪಯೋಗಿಸಿದೆ.

oOo

೩ ತಾಸಿಗೆ ಮೆನೇಜರರು ಬಂದು ಎಬ್ಬಿಸಿ ಹೊಟ್ಟೆತುಂಬಾ ನಗಾಡಿದರು. ಏಕೆಂದು ಅವರಿಗೆ ಗೊತ್ತು. ಊಟಮಾಡಲು ಮನೆಗೆ ಹೋದೆ.

---

# ರಾಮು-ದೂಮು

## ದೂಮುನು ಅಂಚೆ ಚೀಟಿಲ್ಲದೆ ಕಾಗದ ಕಳುಹಿಸಿದ್ದು!

ಬರೆದವ ''ಜಾಲಿ



"ದೂಮಾ, ಕರೆದರೆ ಕೇಳೋದಿಲ್ಲೇನೊ! ಈ ಕಾಗದಗಳಿಗೆ ಅಂಚೆಚೀಟು ಹಚ್ಚಿಸಿ ಪೆಟ್ಟಿಗೆಗೆ ಹಾಕಿ ಬಾ, ತಿಳಿಯಿತೆ?"

"ಅಯ್ತು, ಆದರೆ ಪೆಟ್ಟಿಗೆಗೆ ಬೀಗ ಹಾಕಿದ್ದರೆ ನಾನು ಕಾಗ್ದ ಹಾಕೋದು ಹೇಗೆ? ರಾಮು?"

"ಬರೇ ಬೆಪ್ಪಸೋ ನೀನು! ನಿನ್ನ ಮನೇಬಳಿಯಲ್ಲಿರುವ ಟಪ್ಪಾಲು ಪೆಟ್ಟಿಗೆಗೆ ಬೀಗಹಾಕುತ್ತಾರೇನೋ ಪೆಂಗ? ನಾವು ಮೊದಲಿನಂತಲ್ಲ. ಈಗ ನಾನು ಮನೇಜರ್, ನೀನು ಪೇದೆ, ಗೊತ್ತೇ"

"ಒಹ್ಹೋ."

ಹ್ಹೆಂ: ಯಾರು ನೋಡೋದಿಲ್ಲ. ಚೀಟು ಹಚ್ಚಿಸದಿದ್ದರೆ ನಮ್ಮ ಮೆನೇಜರ್ ರಾಮೂಗೆ ಒಂದು ರೂಪಾಯಿ ಲಾಭವಾಗೋದಿಲ್ವೆ. ಹ್ಹೆಂ! ನಾನು ಭಾರಿ ಬುದ್ಧಿವಂತನಾಗುತ್ತೇನೆ. ಹಾಕಿ ಬಿಡ್ತೇನೆ. ಚೀಟಿಲ್ಲದೆ ಕಾಗ್ದ.

"ಏನೋ ದೂಮು, ಕಾಗ್ದಕ್ಕೆ ಚೀಟು ಅಂಟ್ಸಲಿಲ್ಲವೇಕೋ? ನಾನ್ಹೇಳ್ದಂತ ಹೇಳಿದ್ದಕ್ಕೂ ನೀನು ಮಾಡಿದ್ದಕ್ಕೂ ಸರಿಯಾಯಿತು. ನಿಂಗೆ ಜುಜ್ಮಾನೆ ಹಾಕುತ್ತೇನೆ ನೋಡು."

"ನಿಂಗೇನು ಗೊತ್ತಿದೆ ರಾಮು? ನೀನು ಈಗ ಮೆನೇಜರನಾಗಿರುವುದಿದ್ದರೂ ನನಗೆ ನಿನ್ಗಿಂತ ಹೆಚ್ಚು ಬುದ್ದಿಯಿದೆ. ಗೊತ್ತೇ?"

"ಹ್ಹೆಂ!"

"ಮತ್ತೆ!"



"ಮತ್ತೇನು ಮಾಡಿದೆಯೋ, ದೂಮ. ಅಂಚೆ ಚೀಟು ಹಿಂದೆ ತಂದಿದ್ದಿಯಲ್ಲ?"

"ಹೌದು ಹಿಂದೆ ತಂದಿದ್ದೇನೆ. ಏನಾಯಿತು. ನಾನು ಟಪ್ಪಾಲು ಪೆಟ್ಟಿಗೆಯೊಳಗೆ ಕಾಗದ ಹಾಕುವಾಗ ಯಾರೂ ನೋಡಲಿಲ್ಲ."

"ಬೇಷ್, ಬಹಳೇ ಬುದ್ಧಿವಂತನಪ್ಪಾ ದೂಮು!"

"ದೂಮಾ, ಈ ತಿಂಗಳಲ್ಲಿ ನಿನ್ನ ಸಂಬಳ ಹೆಚ್ಚಿಸಬೇಕೆಂದಿದ್ದೇನೆ.

ನಿನ್ನಂಥ ಪೇದೆಗಳಿದ್ದರೆ ನಾನು ಧನ್ಯ"

"ಹ್ಹಿ! ಹ್ಹಿ! ಹ್ಹಿ! ಮತ್ತೆ ನಾನು ಯಾವಾಗಲೂ ನಿಂಗೆ ಉಪಕಾರ ಮಾಡುವುದಲ್ಲದೆ ನಷ್ಟಮಾಡಲಿಕ್ಕಿಲ್ಲವೆಂದು ನಿಂಗೆ ಗೊತ್ತಿಲ್ಲೆನೋ ರಾಮು?"

"ಬೇಷ್, ಬೇಷ್, ದೂಮುನೆಂದರೆ ಭಾರೀ ಬುದ್ಧಿವಂತ. ಹ್ಹೆಂ! ಪಾರ್ಸೆಲ್ ಚೆನ್ನಾಯಿತು. ಈ ಗಂಟನ್ನು ತಲೆಕೆಳಗೆ ಮಾಡಬಹುದು. ಉರುಳಿಸಬಹುದು. ಏನು ಬೇಕಾದರೂ ಮಾಡಬಹುದು. ಎಲ್ಲಿಗೂ ಕೊಂಡು ಹೋಗಬಹುದು."

"ರಾಮಾ, ಅದೇಕೋ ನನ್ನ ಮೇಲೆ ಬಟ್ಟೆಸುತ್ತಿ ಹಗ್ಗದಿಂದ ಕಟ್ಟಿ ಹಾಕಿದ್ದಿ. ನನ್ನ ಮುಖ, ಕೆನ್ನೆ, ತಲೆ, ಮೇಲೆ ಅಂಚೆ ಚೀಟು ಅಂಟಸಿದ್ದೇಕೆ ರಾಮು?"

"ಒಹ್ಹೋ! ನಿನ್ನ ತಲೆಗಾಗಿ ನಿನ್ನನ್ನು ಅಮೇರಿಕಕ್ಕೆ ಕಳುಹಿಸಲು ಪಾರ್ಸೆಲ್ ಮಾಡಿದ್ದು. ನಿನ್ನ ತಲೆಯೆಂದರೆ ಕೋತಿ ತಲೆಗಿಂತಲೂ ದೊಡ್ಡದಾಗಿದೆ.

# ಮಹಾ ಕಥೆಗಳು

## ಕಿಟ್ಟೂನ ಮುಯ್ಯಿ

ಖಿಲಾಡಿತನದಲ್ಲಿ ಕಿಟ್ಟೂ ಅಸಮ ಸದೃಶ ಅಂತ ಸಿದ್ಧವಾಗಿ ಹೋಗಿದ್ದನೂತು. ಆದರಿಂದ ಯಾರು ಏನು ತಪ್ಪು ಮಾಡಿದರೂ ಮೊದಲು ವಿಚಾರಣೆ ಮಾಡೋದು ಕಿಟ್ಟೂನ.

ಒಂದು ದಿನ ಮಾಸ್ಟ್ರು ಒಂದು ಒಳ್ಳೇ ಬೆತ್ತ ತಂದು ಕ್ಲಾಸಿನಲ್ಲಿಟ್ಟು ಹೆಡ್ಮಾಸ್ಟ್ರು ರೂಮಿಗೆ ಹೋಗಿದ್ದರು. ಹಿಂದೆ ಬರುವಾಗ ಅದು ಕಾಣೆ.

ಸರಿ. ಕಿಟ್ಟೂನ ಕಿವಿ ಹಿಡಿದು ಎಳೆದು ಕೇಳಿದರು ಮಾಸ್ಟ್ರು. ಕಿಟ್ಟು ತನಗದರ ವಿಚಾರನೇ ಗೊತ್ತಿಲ್ಲ ಅಂದ. ಮಾಸ್ಟ್ರು ಹೊರಗೆ ಹೋದ ಕೂಡಲೆ ತಾನೂ ಹೊರಗೆ ಹೋಗಿದ್ದೆ ಅಂತ ಅವ ಅಂದ.

ಯಾರು ನಂಬಬೇಕು ಅದನ್ನ? ಬೇರೆಯವರನ್ನ ಕೇಳಿದರೆ ತಮಗೇನೂ ಗೊತ್ತಿಲ್ಲಾ ಅಂತಾರೆ.

ಕಿಟ್ಟೂನೇ ತಪ್ಪು ಮಾಡಿರಬೇಕು ಎಂತ ತಿಳಿದು ಮಾಸ್ಟ್ರು ಅವನಿಗೆ ಕೆಂಪು ಶಾಯಿಯಿಂದ ನಾಮ ಎಳೆದು ಇಡೀ ಸ್ಕೂಲಿಗೆ ಮೆರವಣಿಗೆ ಮಾಡಿಸಿದರು. ಅವನ ಕ್ಲಾಸಿನವರೆಲ್ಲಾ ನಕ್ಕು ಗೇಲಿ ಮಾಡಿದರು.

ಸ್ಕೂಲಿನ ಬೋರ್ಡಿಂಗ್ ಹೌಸ್‌ನಲ್ಲಿ ರಾತ್ರಿ ಎಲ್ಲರೂ ಮಲಗಿದ್ದರು. ಒಂದು ಬದಿಯಲ್ಲಿ ಕಿಟ್ಟೂನೂ ಮಲಗಿದ್ದ. ನಿದ್ದೆ ಬಂದಿರಲಿಲ್ಲ. ಎಲ್ಲರೂ ಸೇರಿ ಅವನ್ನ ನಾಚಿಗೆಗೇಡು ಮಾಡಿದ್ದರಲ್ಲಾ, ಹೇಗೆ ಸೇಡು ತೀರಿಸೋದು ಎಂತ.

ಥಕ್ಕನೆ ಒಂದು ವಿಚಾರ ಹೊಳೆಯಿತು. ಮೆಲ್ಲಗೆ ಹೋಗಿ ತನ್ನ ಪೆಟ್ಟಿಗೆಯಿಂದ ಕಲರ್ ಬೋಕ್ಸ್‌ನ ತೆಗೆದು, ತಂಬಿಗೆಯಿಂದ ನೀರು ಬಗ್ಗಿಸಿಕೊಂಡು ಬಿಳಿ ಮತ್ತು ಕಪ್ಪು ಪೆಯಿಂಟುಗಳನ್ನು ತಯಾರಿಸಿದ. ತನಗೆ ಗೇಲಿ ಮಾಡಿ ನಕ್ಕವರಲ್ಲಿ ಬೆಳ್ಳಗಿನವರ ಮೂಗಿಗೆಲ್ಲ ಕಪ್ಪು ಪೆಯಿಂಟ್ ಮತ್ತು ಕಪ್ಪಿನವರ ಮೂಗಿಗೆಲ್ಲ ಬಿಳಿ ಪೆಯಿಂಟ್ ಹಚ್ಚಿದ. ಪುಣ್ಯಕ್ಕೆ ಯಾರಿಗೂ ಎಚ್ಚರವಾಗಲಿಲ್ಲ. ಹೋಗಿ ಹಾಗೇ ಮಲಗಿದ.

ಬೆಳಗ್ಗ ಎಲ್ಲರಿಗಿಂತ ಮೊದಲು ಎದ್ದವ ಕಿಟ್ಟು. ಎದ್ದು ಹೋಗಿ ಮುಖ ತೊಳೆದು ಸಂಭಾವಿತನ ಹಾಗೆ ಒದುತ್ತ ಕುಳಿತ.

ಆ ಮೇಲೆ ಒಬ್ಬೊಬ್ಬರೇ ಎದ್ದರು. ಉಳಿದವರ ಮೂಗಿನ ಮೇಲೆ ಬಣ್ಣ ಇದ್ದದ್ದು ನೋಡಿ ನಗ ಹತ್ತಿದರು. ಪ್ರತಿಯೊಬ್ಬನೂ ತನ್ನನ್ನು ಹೊರತು ಉಳಿದವರ ಮೂಗಿನಲ್ಲಿ ಬಣ್ಣ ಅಂತಲೇ ಭಾವಿಸಿದ್ದ.

ನಗಾಟ ಜೋರಾದದ್ದರಿಂದ ಬೋರ್ಡಿಂಗ್‌ನ ಚಾರ್ಜಿನಲ್ಲಿದ್ದ ಮಾಸ್ಟ್ರು ಬಂದರು. ಎಲ್ಲರ ಮೂಗಿನಲ್ಲೂ ಬಣ್ಣ ಇದ್ದದ್ದು ನೋಡಿ ಅವರಿಗೂ ಮೊದಲು ನಗೆ ಬಂತು.

ತಮ್ಮ ತಮ್ಮ ಮೂಗಿನ ಮೇಲೆ ಬಣ್ಣ ಇದ್ದದ್ದು ತಿಳಿದ ಮೇಲೆ ಎಲ್ಲರೂ ಅಳುವುದಕ್ಕೆ ಹತ್ತಿದರು. ಆಗ ಕಿಟ್ಟೂಗೆ ನಗೆ ತಡೆಯಲಿಲ್ಲ.

ಮಾಮೂಲಿನಂತೆ ಕಿಟ್ಟೂಗೆ ಶಿಕ್ಷೆಯಾಯಿತು. ಆದರೆ ಈ ಸಲ ಅವನಿಗೆ ಬೇಸರವಾಗಲಿಲ್ಲ.

---

## ಶೆಟ್ರ ಟಂಕಸಾಲೆಯಿಂದ

ತನ್ನ ಬಚ್ಚಾಲಿತನದ ಪರಿಣಾಮವಾಗಿ ಕಾಂತಪ್ಪ ಶೆಟ್ಟರು ಕಾಂತು ಶೆಟ್ಟಿಯಾಗಿ ಹೋಗಿದ್ದರು.

ಯಾವ ಯಾವ ಹೋಟೆಲಿನಲ್ಲಿ ಕಡ ಮಾಡಿ ಕಾಫಿ ಕುಡಿದು ದುಡ್ಡಿಗೆ ತಿರ್ಪತಿನಾಮ ಹಚ್ಚಿದ್ದರೆಂದು ಅವರಿಗೇ ಗೊತ್ತು. ಅಂತೂ ಯಾರೂ ಅವರಿಗೆ ಕಾಫಿ ತಿಂಡಿ ಕೊಡುತ್ತಿದ್ದಿಲ್ಲ.

ಒಂದು ದಿನ ಶಂಕರ ಭಟ್ಟರ ಹೊಟೇಲಿಗೆ ಹೋಗಿದ್ದ ಕಾಂತು ಶೆಟ್ಟಿ. ‘ಒಂದು ಸಿಂಗಲ್ ಕಾಫಿ ಕೊಡಿ ಭಟ್ರೇ’ ದರ್ಪ ಸಹಿತ ಹೇಳಿದ.

‘ಕಾಸು ಕೊಡದೆ ಕಾಫಿ ಕೊಡ್ಲಿಕ್ಕೆ ಆಗೋದಿಲ್ಲ’ ಎಂದರು ಶಂಕರ ಭಟ್ರು.

‘ದುಡ್ಡು ತಾರದೆ ಕಾಫಿ ಕುಡಿಯಲಿಕ್ಕೆ ಬರುತ್ತೀನಯ್ಯಾ? ಇಕೊಳ್ಳಿ ನೋಡಿ ಬೇಕಾದರೆ’ ಎಂದು ಅಂಗವಸ್ತ್ರದ ತುದಿಯಲ್ಲಿ ಕಟ್ಟಿದ್ದ ಅರ್ಧಾಣೆಯನ್ನು ತೋರಿಸಿಬ. ಭಟ್ರು ಕಾಫಿ ಕೊಟ್ಟರು.

ಕುಡಿದಾದ ಮೇಲೆ ಕಾಂತುಸೆಟ್ಟಿ ಅಂಗವಸ್ತ್ರದ ತುದಿಯನ್ನು ಬಿಚ್ಚಿ ಸಂಭಾವಿತರ ಹಾಗೆ ಒಂದು ಉರುಟಾದ ವಸ್ತುವನ್ನು ಭಟ್ರ ಮೇಜಿನ ಮೇಲಿಟ್ಟ.

ಭಟ್ರು ನೋಡುತ್ತಾರೆ– ಅದು ಉರುಟಾದ ಒಂದು ರಟ್ಟಿನ ಚೂರು. ಕಾಂತು ಶೆಟ್ರು ಅಷ್ಟರಲ್ಲಿ ಇಪ್ಪತ್ತೈದು ಮಾರು ದೂರ.

---

# "ಅಪರಾಧವೆ?"

ಕತೆಗಾರ: 'ದೇವದಾಸ್'
ಪುತ್ತೂರು.

'ದೇವದಾಸ್'

'ಯಾರು?' ಹಿಂದಿರುಗಿ ನೋಡಿದೆ. ಖಾದಿ ವೇಷಧಾರಿಯಾದ ಉದ್ದದ ಮನುಷ್ಯ. ಪರಿಚಯಸ್ಥನಂತೆ ಕಂಡಿತು. ಆದರೆ ಗುರುತು ಹತ್ತಲಿಲ್ಲ.

'ಗುರುತು ಸಿಕ್ಕಲಿಲ್ಲವೇ'?

'ಹೂಂ, ಇ . . . ಲ್ಲ. ಎಲ್ಲಿಂದ ಬಂದಿರಿ'?

'ಅಂಡಮಾನದಿಂದ' ಮುಖದಲ್ಲಿ ನಾಚಿಕೆಯ ಭಾವವು ಮೂಡಿತ್ತು.

'ಕಿಟ್ಟಣ್ಣನೇ?' ಅನುಮಾನದಿಂದ ಕೇಳಿದೆ.

'ಹೌದು'.

"ಮಿತ್ರಾ, ನಿನ್ನನ್ನು ಕಾಣಲ ರೆನೆಂದಿದ್ದೆ. ಎಂತಹ ಸುಯೋಗವು ನಿನ್ನನ್ನಿಲ್ಲಿಗೆ ಕರೆತಂದಿತು. ನಾನು ಅಂದೇ ಗ್ರಹಿಸಿದ್ದೆ -- ನೀನಂಥಾ ಕೆಲಸಕ್ಕೆ ತೊಡಗಲಾರೆ ಎಂದು. ದೈವವಶಾತ್ ನೀನೀ ಕಷ್ಟಗಳನ್ನೆಲ್ಲಾ ಅನುಭವಿಸಬೇಕಾಯ್ತು. ಮತ್ತು ಅದೇ ದೈವವು ನಿನ್ನನ್ನಿಲ್ಲಿಗೆ ಮರಳಿ ಕರೆತಂದಿತು". ಮಾತಾಡುತ್ತಾ ನಾವಿಬ್ಬರೂ ನಮ್ಮೂರ ಮೈದಾನನನ್ನು ಸೇರಿದೆವು. ಕಿಟ್ಟಣ್ಣನು ನನ್ನ ಸಹಪಾಠಿ. ನಾವಿಬ್ಬರೂ ಪ್ರೀತಿಯ ಗೆಳೆಯರಾಗಿದ್ದೆವು. ಸಣ್ಣ ಪ್ರಾಯದಲ್ಲಿಯೇ ತಂದೆಯನ್ನು ಕಳೆದುಕೊಂಡುದರಿಂದ ತಾಯಿಯನ್ನು ಸಾಕುವ ಭಾರವು ಅವನ ಮೇಲೆ ಬಿತ್ತು. ಶಾಲೆಯನ್ನು ಬಿಟ್ಟು ಹಳ್ಳಿಗೆ ನಡೆದ. ಸ್ವಲ್ಪ ಸಮಯದಲ್ಲಿಯೇ ಯಾವುದೊ ಒಂದು ಖೂನಿ ಮೊಕದ್ದಮೆಯಲ್ಲಿ ಅವನಿಗೆ ಜನ್ಮಾಂತರ ಶಿಕ್ಷೆಯಾಯಿತೆಂಬ ಸುದ್ದಿ ನನಗೆ ತಿಳಿದು ಬಂತು.

ಮೈದಾನದ ಒಂದು ಮೂಲೆಯಲ್ಲಿ ನಾವಿಬ್ಬರೂ ಕುಳಿತೆವು. 'ಕಿಟ್ಟಣ್ಣ, ನೀನಾ ಕೊಲೆಗೆ ಹೇಗೆ ಕಾರಣನಾದೆ'? ನಾನು ಪ್ರಶ್ನಿಸಿದೆ. 'ಅದೊಂದು ವಿಚಿತ್ರ ಕಥೆ ದಾಸಣ್ಣ. ಲೋಕವು ನನ್ನನ್ನು ಅಪವಾದಕ್ಕೆ ಗುರಿ ಮಾಡಿದ್ದರೂ ನಿಜವಾಗಿ ನಾನು ತಪ್ಪಿತಸ್ಥನಲ್ಲ. ಅವನು ಸತ್ತು ಸ್ವರ್ಗಕ್ಕೆ ಹೋಗಿರಬಹುದು. ನನ್ನ ಪಾಲಿನ ಶಿಕ್ಷೆಯನ್ನು ನಾನು ಅನುಭವಿಸಿ ತೀರಿತು. ಇನ್ನು ಆ ಬಗ್ಗೆ ಸುಳ್ಳು ಹೇಳಿ ಅಪವಾದವನ್ನು ಮುಚ್ಚಬೇಕೆಂದು ಬಗೆದರೆ ನನಗೆ ಎಂತಹ ನರಕ ಪ್ರಾಪ್ತಿಯಾದೀತೋ ಹೇಳಲಾರೆ. ನಿಜವಾಗಿ ನಡೆದ ಸಂಗತಿಯನ್ನು ಹೇಳುವೆನು. ಅದರಿಂದಲಾದರೂ ಅಪವಾದದಿಂದ ಬೆಂದ ನನ್ನ ಹೃದಯವನ್ನು ಅಷ್ಟು ತಣಿಸಿಕೊಳ್ಳುವೆನು.' ಅವನ ಕಂಠವು ಬಿಗಿಯಿತು.

'ಹಾಗಾದರೆ ನಡೆದ ವಿಚಾರವೇನು'? ನಾನು ಉತ್ಸುಕತೆಯಿಂದ ಕೇಳಿದೆ

ಅವನು ಗದ್ಗದಿತನಾಗಿ ಹೇಳತೊಡಗಿದನು. 'ಬೇಸಗೆ ಕಳೆದು ಮಳೆಗಾಲದ ಆರಂಭ. ಮಳೆಯು ಆಗಲೇ ಬಂದು ನಿಂತಿತ್ತು. ಆದರೂ ಮೋಡಗಳು ಆಕಾಶವನ್ನೆಲ್ಲಾ ವ್ಯಾಪಿಸಿ ರಾತ್ರಿಯನ್ನು ಮತ್ತಷ್ಟು ಕರಾಳವಾಗಿಸಿದ್ದವು. ನಮ್ಮ ಮನೆ ಪೇಟೆಯಿಂದ ಎರಡು ಮೈಲು ದೂರ.'

'ಮಳೆ ನಿಂತಿತೆಂಬಾಗಿ ತಿಳಿದು, ನಮ್ಮೂರ ನಾರ್ಣಪ್ಪನ ಹೊಟೆಲಿನಲ್ಲಿ ಇಟ್ಟದ್ದ ಕೊಡೆಯನ್ನೆತ್ತಿ ಹಿಡಿದು ಹೊರಡಲುದ್ಯುಕ್ತನಾದೆ.'

'ಏನಯ್ಯ ಒಬ್ಬಂಟಿಗರಾಗಿ ಹೊರಟರಿ!' ಹೋಟ್ಲು ನಾರ್ಣಪ್ಪನವರು ಕೇಳಿದರು.

"ಈಗಲೆ ಹೋಗಬೇಕಾಗಿದೆ. ಮನೆಯಲ್ಲಿ ಯಾರೂ ಇಲ್ಲ. ಬೇಗನೆ ಬರ ಬೇಕೆಂತ ಮಾಡಿದ್ದೆ. ಹಾಳು ಮಳೆ ತೊಂದರೆ ಕೊಟ್ಟಿತು" ಎಂದೆ.

'ರಾತ್ರಿ ಕಾಲ. ಕಾಲುದಾರಿ. ಯಾರನ್ನೂ ಸಂಗಡತರಲಿಲ್ಲವೇ? ಮೊನ್ನೆ ತಾನೆ ಗುಂಪಕಲ್ಲಿನಲ್ಲಿ . . . .' ನಾರ್ಣಪ್ಪನವರು ಒಮ್ಮೆಲೆ ಮಾತು ನಿಲ್ಲಿಸಿದರು. ಏಕೆ ಹೇಳಿಬೇನೆಂಬ ಯೋಚನೆಯು ಅವರ ಮುಖದಲ್ಲಿ ಕಾಣುತ್ತಿತ್ತು.

'ನಿಜ, ಎಂತಹ ಭೂತ ಪಿಶಾಚಿಗಳಿಗೂ ಹೆದರುವವ ನಾನಲ್ಲ. ಅವು ಹೆದರಿದವರಿಗೇನೇ ಹೆದರಿಸುವದು!' ನಾನು ನನ್ನ ಎದೆಗಾರಿಕೆತನವನ್ನು ಬಿಚ್ಚಿ ಹೇಳಿದೆ.

'ಹಾಗೇನಿಲ್ಲ ಆದರೂ ಇಲ್ಲೇ ಮಲಗಿ ಬೆಳಿಗ್ಗೆ ಎದ್ದು ಹೋದರಾಗದೇ?" ಎಂದರು ನಾರ್ಣಪ್ಪ.

'ಇಲ್ಲ ಈಗ ಹೋಗ ಬೇಕಾಗಿದೆ.' ಎಂದು ಮೆಟ್ಟಲನ್ನಿಳಿದು ಹೊರಟೆ.

ನಮ್ಮ ಹಳ್ಳಿಯ ಕೆಳಗಿನ ಮನೆ ಚೆನ್ನಪ್ಪನೂ, ತೋಟದ ಮನೆ ನೀಲಯ್ಯನೂ ಇನ್ನೂ ಅಲ್ಲೇ ಕುಳಿತು ಹರಟೆ ಹೊಡೆಯುತ್ತಿದ್ದರು. ಅವರೂ ಬರುವರೆಂದೇ ತಿಳಿದಿದ್ದೆ. ಆದರೆ ಅವರು ಹೊರಡುವಂತೆ ಕಾಣಲಿಲ್ಲ. ನನಗೂ ಅವರಿಗೂ ಒಂದು ನೀರಿನ ವ್ಯಾಜ್ಯದಿಂದ ಅಷ್ಟಷ್ಟೆ. ಆದ್ದರಿಂದ ಅವರೊಡನೆ ಮಾತಾಡದೆ ಹೊರಬಿದ್ದೆ.

ಸಾಧಾರಣ ರಾತ್ರಿ ಹತ್ತು ಘಂಟೆ. ಪೇಟೆಯಲ್ಲಿ ನಿಶ್ಶಬ್ದ. ದೀಪ ಒಂದೂ ಕಾಣುತ್ತಿರಲಿಲ್ಲ. ಕೈಯಲ್ಲಿದ್ದ ಇಲೆಕ್ಟ್ರಿಕ್ ಲೈಟಿನ ಪ್ರಕಾಶದಿಂದ ಮುಂದರಿದೆ ಮಾರ್ಗವನ್ನು ದಾಟಿ ರೋಡಿಗಿಳಿದೆ. ಅಲ್ಲಿಂದ ಆ ಫರ್ಲಾಂಗು ರೋಡು ಕಳೆದು ಬೈಲಿಗಿಳಿದು ಮನೆಗೆ ಮುಟ್ಟಬೇಕಾಗಿತ್ತು. ರೋಡು ದಾಟೆ ಬೈಲಿಗಿಳಿಯುವಲ್ಲಿಯೇ ಗುಂಪೆ ಕಲ್ಲು. ಇಬ್ಬದಿಗಳಲ್ಲೂ ಕಡಿದಾದ ಬಂಡೆಗಳಿಂದ ಕೂಡಿ ಮಾರ್ಗವು ಇಕ್ಕಟ್ಟಾಗಿ ಹೋಗುವವರಿಗೆ ಭಯಂಕರವಾಗಿ ಕಾಣುವುದು. ಅದೇ ಗುಂಪೆ ಕಲ್ಲು. ಅದು ನಮ್ಮ ಹಿರಿಯರ ಕಾಲದಿಂದಲೂ ಪ್ರಸಿದ್ಧಿಗೊಂಡಿತ್ತು. ಅಲ್ಲಿಯ ಒಂದು ಬ್ರಹ್ಮರಾಕ್ಷಸವ

ಎಷ್ಟೋ ಜನರನ್ನು ಹೆದರಿಸಿ ಬಲಿಗೊಂಡಿತ್ತು. ಅಲ್ಲಿಯ ಎಷ್ಟೊ ಕತೆಗಳನ್ನು ನಮ್ಮ ಹಳ್ಳಿಯವರೆಲ್ಲಾ ಹೇಳುತ್ತಿದ್ದರು. ಮೊನ್ನೆ ತಾನೆ ಒಬ್ಬ ಹುರುಪಿನ ಯುವಕನು ಅಲ್ಲಿಯೇ ಹೆದರಿ ಕಾಯಿಲೆ ಬಿದ್ದಿದ್ದನು.

ಲಾಂದ್ರದ ಪ್ರಕಾಶವು ಮಂದವಾಗುತ್ತಾ ಬರುತ್ತಿತ್ತು. ದಾರಿಯು ಸಾಗುತ್ತಿದ್ದಂತೆ ಒಂದರ ಹಿಂದೊಂದು ವಿಚಾರಗಳು ನೆನಪಿಗೆ ಬಂದು, ಎಷ್ಟು ಧೈರ್ಯ ತಂದುಕೊಂಡರೂ ಹೆದರಿಕೆಯು ಮತ್ತಷ್ಟು ಜಾಸ್ತಿಯಾಗ ಹತ್ತಿತು. ಹಿಂದೆ ನನ್ನ ಅಜ್ಜನು ಹೊಂಕರಿಸಿ ಹೋಗುತ್ತಿದ್ದ ಪಿಶಾಚಿಗೆ ಕತ್ತಿ ಬಿಸಾಡಿದ್ದು, ಅದು ಕಿರಿಚಿಕೊಂಡು ಹೋದದ್ದು, ಮರುದಿನ ಅಲ್ಲಿ ಪಾಚಿಯು ಕಂಡು ಬಂದದ್ದು- ಆ ನಂತರ ಅದು ಕಾಣದಾದದ್ದು, ಇತ್ಯಾದಿಯಾಗಿ ಗತಕಾಲದ ಅನೇಕ ಸಂಗತಿಗಳು ನೆನಪಿಗೆ ಬಂದು ಹೋದವು. ನಿಜವಾಗಿಯೂ ಪಿಶಾಚಿ ಸತ್ತರೆ ಪಾಚಿಯಾಗುವುದೇ? ಮಾನವರು ಸತ್ತು ಕಾಂಕ್ಷೆಯಿಂದ ಪಿಶಾಚಿಯಾಗುವರೆಂದು ಕೇಳಿದ್ದೇನೆ. ಆದರೆ ಪಿಶಾಚಿ ಸತ್ತು, ಏನಾಗುತ್ತದೆ? ಅದನ್ನು ಸೃಷ್ಟಿಸಿದವನೇ ಬಲ್ಲ" ಕಿಟ್ಟಣ್ಣನು ಉಸಿರೆಳೆದುಕೊಂಡು ಕಂಠವನ್ನು ಸರಿಪಡಿಸಿಕೊಂಡನು. 'ಆನಂತರ ಏನಾಯಿತು' ನಾನು ಕೇಳಿದೆ.

ಅಂಧಕಾರವು ಮತ್ತಷ್ಟು ಜಾಸ್ತಿಯಾಯಿತು. ಧೈರ್ಯ ತಂದುಕೊಂಡು ಮಂದಗತಿಯಿಂದ ಮುಂದಡಿಯಿಟ್ಟೆ. ಆ ಗುಂಪಕಲ್ಲ ತೀರ ಸನಿಯಕ್ಕೆ ಬಂದೆ. ಅದಕ್ಕೂ ನನಗೂ ಅರ್ಧ ಫರ್ಲಾಂಗಿನ ಅಂತರವೇ ಉಳಿಯಿತಷ್ಟೆ. ಎದೆಯು ಝಲ್ಲೆಂದಿತು. ಹಾ! ಅಲ್ಲಿಯೆ ಏನೋ ಕುಳಿತಿರುವುದು. ಬಿಳಿ ಮುಸುಕನ್ನು ಧರಿಸಿ ಕುಳಿತು ಕೊಂಡಿದ್ದಿತ್ತು!

ಹೂಂ......ಹೂಂ......ಏನೋ ಮರುಗುವ ಶಬ್ದ. ಕೂತಿದ್ದ ಆಕೃತಿ ನಿಂತುಕೊಂಡಿತು. ನನ್ನ ಕಾಲುಗಳು ಹಿಂದಾದುವು. ಹೆಗಲ ಮೇಲಿದ್ದ ಕೋವಿಯನ್ನು ಗಟ್ಟಿಯಾಗಿ ಹಿಡಕೊಂಡೆ. ಅಂದರೆ ಕಬ್ಬಿಣ ಕೈಯಲ್ಲಿದ್ದರೆ ಎಂಥ ಭೂತವಾದರೂ ಕಾಣದೇ ಹೋಗುವುದು. ಇದು ಹಿರಿಯರ ಅನುಭವ. ನಿಂತಿದ್ದ ಆಕೃತಿಯು ಕುಳಿತಂತೆ ಕಂಡಿತೆ ವಿನಹ ಕಾಣದೆ ಹೋಗಲಿಲ್ಲ. ನಾನು ಮೆಲ್ಲಗೆ ಹಿಂದೆಸರಿದು ಯಾರಾದರೂ ದಾರಿಗರು ಬರುವರೊ ಎಂದು ನೋಡಿದೆ. ಸುತ್ತಲೂ ಗಾಢಾಂಧಕಾರದ ವಿರಾಟ್ಸ್ವರೂಪವೇ ವಿನಹ ಮತ್ಯಾವುದೂ ಕಾಣಲಾರದು. ನಾನು ಹಿಂದೆ ನಾಲ್ಕಾರು ಮಾರು ಬಂದು ಅಲ್ಲಿ ಒಂದು ಕಲ್ಲಿನ ಮೇಲೆ ಕುಳಿತು ಬಿಟ್ಟೆ.

"ಕಿಟ್ಟಣ್ಣ, ನಿನ್ನ ಕೋಲಿಗೂ ಭೂತದ ವಿಚಾರಕ್ಕೂ ಏನು ಸಂಬಂಧ' ನಾನೆಂದೆ. 'ಎಲ್ಲ ಹೇಳುತ್ತೇನೆ ಕೇಳು' ಎಂದ ಕಿಟ್ಟಣ್ಣ. ನಾನು ಮೌನವಾದೆ. ಕಿಟ್ಟಣ್ಣ ಮುಂದುವರಿಸಿದ.

"ಆದಷ್ಟು ಮನಸ್ಸನ್ನು ದೃಢಪಡಿಸಿದೆ. ಆಪತ್ಕಾಲದಲ್ಲಿ ಧೈರ್ಯಗೆಡುವವ ಮೂರ್ಖ ಎಂದು ಮನಸ್ಸಿನಲ್ಲಿ ಗ್ರಹಿಸಿದೆ. ಮುಂದುವರಿಯಲು ಸಾಧ್ಯವಿಲ್ಲ. ಹಿಂದೆ ಬರಲು ಕಾಣಿಸದು. [illegible] ಲಾಂದರದ ಪ್ರಕಾಶವು ಪೂರ್ಣ ಕಳೆಗುಂದಿ ಕಾಣದಾಯಿತು. ಹೆದರಿಕೆಯಿಂದ ಹಿಮದಲ್ಲಿ ಮುಚ್ಚಿಟ್ಟಂತೆ ನನ್ನ ಶರೀರವು ಸುಕ್ಕುಗಟ್ಟಿತು. ನೆತ್ತರೇ ನನ್ನ ಮೈಯಲ್ಲಿ ಚಲಿಸದ ಹಾಗೆ ಕಂಡಿತು. ಆದರೆ ಬೆವರು ಅಖಂಡ ಗ್ರೀಷ್ಮ ಕಾಲದಲ್ಲಿ ಬೆಂಕಿಯ ದಾಹದಲ್ಲಿ ಕುಳಿತಂತೆ ಧಾರಾಕಾರವಾಗಿ ಸುರಿಯುತ್ತಿತ್ತು. ನಿಜ, ಇದು ನನ್ನ ಅಂತಿಮಕಾಲ! ಇಂದು ಏನಾದರೊಂದು ಘಟಿಸಿಯೇ ತೀರುವುದು. ದೇವರ ಶತಸಹಸ್ರ ನಾಮವು ಏಕ ಕಾಲದಲ್ಲಿ ಉಚ್ಚರಿಸಲ್ಪಟ್ಟಿತು. ನಾಲಿಗೆಯ ಪಸೆ ಆರಿತು. ಸಾವು ಸನ್ನಿಹಿತವಾಯಿತೆಂದುಕೊಂಡೆ.

ತಟ್ಟನೆ ಮನಸ್ಸಿನಲ್ಲಿ ಒಂದು ಆಲೋಚನೆ. ಎಂತೂ ಸಾಯುವುದೇ, ಆದರೂ ಪ್ರಾಣವಿರುವ ತನಕ ಹೊಡೆದಾಡಲೇ ಬೇಕು. ನೆಲದಲ್ಲಿಟ್ಟಿದ್ದ ಕೋವಿಯನ್ನು ಕೈಲಿ ಹಿಡಿದುಕೊಂಡೆ. ಮನಸ್ಸನ್ನು ದೃಢಪಡಿಸಿದೆ. ವೀರಯೋಧರು ತಮ್ಮ ಖಡ್ಗವನ್ನು ಚುಂಬಿಸುವಂತೆ ಅದನ್ನು ಚುಂಬಿಸಿದೆ, ಇಂದು ಈ ಕೋವಿಯು ನನ್ನ ಕೈಯಲ್ಲಿರುತ್ತಿದ್ದಿಲ್ಲವಾದರೆ? ದೈವಯೋಗದಿಂದಲೇ ಹೊಸದಾಗಿ ಲೈಸನ್ಸು ಸಿಕ್ಕಿ ನನ್ನ ಹಸ್ತಗತವಾದುದು. ಇದರಿಂದಲೇ ಅದರ ಅಂತ್ಯ. ಎಂದುಕೊಂಡು ಶೂರನಂತೆ ಅಲ್ಲಿಂದ ಮುಂದರಿದೆ. ಕೋವಿಗೆ ತೋಟೆಯನ್ನಿಟ್ಟು ನೋಟಕ್ಕೆ ಸರಿಯಾಗಿ ಹಿಡಿದೆ. ಕೋವಿಯು ಮುಂದೆ, ನಾನು ಹಿಂದೆ. ಕೆಲವು ಮಾರು ಹೋದೆ. ಅಲ್ಲಿಂದ ಗುಂಪಕಲ್ಲಿನೆಡೆಗೆ ನೋಡಿದೆ, ಅದೇ ಆಕೃತಿ ಮುಂಚಿನಂತೆ ಸ್ಥಿರವಾಗಿತ್ತು.

ಭರದಿಂದ ಬಿರುಗಾಳಿ ಬೀಸಿತು. ಮೋಡಗಳು ಆಕಾಶವನ್ನಾವರಿಸಿದವು. ಮಿಂಚೊಂದು ಮಿಂಚಿ ಕಲ್ಲಮೇಲೆ ಕುಳಿತಿರುವ ಆಕೃತಿಯನ್ನು ಸ್ಪಷ್ಟ ಕಾಣಿಸಿ ತಿರುಗಿ ಗಾಢಾಂಧಕಾರದಲ್ಲಿ ಲೀನವಾಯಿತು. ಕೋವಿಯನ್ನು ಆದಷ್ಟು ಗಟ್ಟಿ ಹಿಡಿದು ನೋಟದ ಗುರಿ ಸರಿಪಡಿಸಿದೆ. ಹಾ, ಅದೇನು? ಚಿಕ್ಕ ಆಕೃತಿಯು ಅಸ್ಪಷ್ಟ ಬೆಳಕಿನಲ್ಲಿ ಬೆಳೆಯುತ್ತಿರುವಂತೆ ಕಂಡಿತು. ಅತಿ ದೊಡ್ಡದಾಗಿ ಕಾಣಿಸಿತು. ಮೈ ಬೆವರಿತು. ಕಾಲು ಜಾರಿತು, ಕೈನಡುಗಿತು, ಭಯ ವಿಕಾರವು ನನ್ನ ಇಡೀ ಶರೀರವನ್ನು ತನ್ನಾಧೀನ ಮಾಡಿತು. ಢುಂ! ಬಂದೂಕಿನ ಅಗ್ನಿ ಜ್ವಾಲೆಯು ನನ್ನ ಕಣ್ಣುಗಳನ್ನು ಕುಕ್ಕಿತು. ಭಯಂಕರ ಚೀರಾಟವೊಂದು ಕೇಳಿಸಿತು. ನಾನು ಕೆಳಗೆ ಕುಸಿದುಬಿದ್ದೆ."

"ಪೂರ್ತಿಯಾಗಿ ಕೇಳು ಮಹಾರಾಯ! ಅದರಿಂದಲೇ ನಾನು ಇಷ್ಟೆಲ್ಲ ಅನುಭವಿಸಬೇಕಾಯಿತು!" ಕಿಟ್ಟಣ್ಣ ನಿಟ್ಟುಸಿರು ಬಿಟ್ಟು ಹೇಳತೊಡಗಿದ. 'ಭೂತವು ತೀರಿ ಹೋಯಿತು, ನಾನಿನ್ನೂ ಜೀವಂತನಿದ್ದೇನೆಂದು ಮೆಲ್ಲನೆ ಎದ್ದು ನಿಂತೆ. ಯಾರದು?" ಹಿಂದಿನಿಂದೊಂದು ಧ್ವನಿ ಕೇಳಿತು. ಹಿಂತಿರುಗಿ ನೋಡಲು ಹೋಟೇಲಿನಲ್ಲಿ ವಿಶ್ರಮಿಸಿದ್ದ ನಮ್ಮೂರ ಮಹಾಶಯರು. ಅವರು ಇತ್ತ ಬರುವುದರೊಳಗಾಗಿ ಪಿಶಾಚವನ್ನು ಸಂಹರಿಸಿದುದರಿಂದ ಮನಸ್ಸಿನಲ್ಲೇ ಹೆಮ್ಮೆ ಪಟ್ಟು 'ತೊಂದರೆ ನಿವಾರಣೆಯಾಯಿತು. ಪಿಶಾಚಿ!' ಎಂದು ಅವರು ಕೇಳುವ ಹಾಗೆ ಹೇಳಿದೆ. ಇಡೀ ಹಳ್ಳಿಯವರ ಭಯ ನಿವಾರಣೆ ಮಾಡಿದ ಸಾಹಸವು ನನ್ನದು ಎಂದು ಉಬ್ಬಿದೆ. ಅವರಿಬ್ಬರೂ ಮುಂದರಿದು ಹೋದರು. ನಾನು ಹಿಂದಿನಿಂದಲೇ ಹೋದೆ. ಅವರು ಕಲ್ಲಿನ ಬಳಿ ಸಾರಿ ಕಂದೀಲ

ಬೆಳಕಿನಲ್ಲಿ ನೋಡಿದರು. 'ಅಯ್ಯೋ ಖೂನಿ' ಎಂದು ಬೆದರಿದ ನೊಬ್ಬ. ಅಷ್ಟರಲ್ಲಿ ನಾನು ಸ್ಥಳಕ್ಕೆ ಮುಟ್ಟಿದೆ. ಬಲವಾದ ಮಿಂಚೊಂದು ಕೆಳಗೆ ಬಿದ್ದಿದ್ದ ವ್ಯಕ್ತಿಯ ಪರಿಚಯ ಮಾಡಿ ಕೊಟ್ಟಿತು. ಅದಕ್ಕೂ ಮಿಗಿಲಾದ ಗುಡುಗೊಂದು ನನ್ನ ಹೃದಯ ವನ್ನು ಹೊಕ್ಕು ನುಚ್ಚು ನೂರಾಗಿ ಮಾಡಿತು. ಸಾಹಸದಿಂದ ಉಬ್ಬಿ ಹುರುಪುಗೊಂಡ ನನಗೆ ಸುಂದರವಾದ ಭವನವನ್ನು ಕಟ್ಟಿ ಅದ ರಲ್ಲಿ ಪ್ರವೇಶ ಸಮಾರಂಭವನ್ನು ಜರುಗಿಸುವ ವಿಜೃಂಭಣೆಯಲ್ಲಿ ವೈರಿ ವಿಮಾನದಿಂದ ಎಸೆಯಲ್ಪಟ್ಟ ಬಾಂಬೊಂದು ನನ್ನನ್ನೂ ಗೋಪುರಗಳನ್ನೂ ಧ್ವಂಸಮಾಡಿದಂತಾಯಿತು ನನ್ನ ಸ್ಥಿತಿ. ನಿಂತಲ್ಲೇ ಒರಗಿದೆ.''

ಆ ಗಾಢರಾತ್ರಿಯಲ್ಲಿ ಹಳ್ಳಿ ಜನರೆಲ್ಲರೂ ಕೂಡಿದರು. ಸಿಪಾಯಿಗಳೂ ಜಮಾದಾರರೂ ಬಂದರು. ಶವಕ್ಕೆ ಗುಂಡು ಎದೆಗೆ ನಾಟಿತ್ತು. ರಕ್ತದ ಹಳ್ಳವೇ ಹರಿದಿತ್ತು. ಕೆಲವು ಕಡೆ ಪಾಂತಿ ಮಾಡಿದ ಗುರುತು ಕಾಣುತ್ತಿತ್ತು. ತೀರಿದವನಿಗೆ ಅಸೌಖ್ಯವಿತ್ತೆಂದು ಕಂಡು ಬರುತ್ತಿತ್ತು. ಜಮಾದಾರನು ಶವದ ಹತ್ತಿರ ಹೋಗಿ ನೋಡಿದ.

''ಇದಾರು ಇಲ್ಲಿಯವರೇ?'' ಜಮಾದಾರನ ಪ್ರಶ್ನೆ.

'ಪಟೇಲ ರಾಮಯ್ಯನೋರ ಅಳಿಯ ಸಾಮಿ!'ಗುಂಪಿನಿಂದೊಂದು ಸ್ವರ

ನನ್ನ ರೋಮವೆಲ್ಲವೂ ನೆಟ್ಟಗಾಯಿತು. ಅಷ್ಟರಲ್ಲೇ ಪಟೇಲ ರಾಮಯ್ಯನೋರು ಗೋಳೋ ಎಂದು ಅಳುತ್ತ ಜನಸಂದಣಿ ಯೊಳಗಿಂದ ಶವದ ಹತ್ತಿರಕ್ಕೆ ಬಂದರು.

'ಕಿಟ್ಟಣ್ಣನೇ ಹತ್ಯಾಕಾರಿಯು' ಕೆಳಗಿನ ಮನೆ ಚನ್ನಪ್ಪನಂದ.

ಜನರೆಲ್ಲರ ಲಕ್ಷ್ಯವು ನನ್ನ ಕಡೆ ತಿರುಗಿತು. ಜಮಾದಾರನ ಕೆರಳಿದ ಕಣ್ಣುಗಳು ನನ್ನನ್ನೇ ನೋಡುತ್ತಿದ್ದುವು. ನಾನು ಮುಖ ತಗ್ಗಿಸಿದೆ. ನಿಜ, ಮಾಡಿದ್ದನ್ನು ಇನ್ನು ಅನುಭವಿಸಿಯೇ ತೀರಬೇಕು ನನ್ನ ಮನಸ್ಸಿನಲ್ಲೇ ಗ್ರಹಿಸಿದೆ.

'ಇವರೊಳಗೇನಾದರೂ ದ್ವೇಷವಿತ್ತೇ?' ಜಮಾದಾರ ಕೇಳಿದ

ನಮ್ಮ ರಾಯರ ಮಗಳನ್ನು ಕಿಟ್ಟಣ್ಣಗೆ ಕೊಡೂವುದಂತೆ ಮಾಡಿದ್ರು ಸಾಮಿ. ಆದ್ರೆ ಆ ಮೇಲೆ ಆಚೇ ಹಳ್ಳಿಯ ಈ ನಾಗಣ್ಣ ನೋರಿಗೆ ಕೊಟ್ರು ಸಾಮಿ!' ರಾಮಯ್ಯನವರ ಉಗ್ರಾಣಿಯ ದ್ವೇಷದ ರುಜುವಾತು.

'ದ್ವೇಷದಿಂದಲೇ ಮಾಡಿದ ಕೊಲೆ ನಾನು ಚೆನ್ನಪ್ಪನೂ ಬರುವಾಗ ಪಿಶಾಚಿ ತೊಂದ್ರೆ ನಿವಾರಣೆಯಾಯಿತೆಂದ, ಸ್ವಾಮಿ!' ತೋಟದ ನೀಲಯ್ಯನ ಹೇಳಿಕೆ. ಜಮಾದಾರರು ಬರಕೊಂಡರು. ತಪ್ಪು ಸ್ಥಿರ ವಾಯಿತು.

ಇದೇ ನಾನು ಮಾಡಿದ ಅನ್ಯಾಯ. ಆದ್ದರಿಂದ ಪಡಬೇಕಾದ ಕಷ್ಟ ಅನುಭವಿಸಲೇ ಬೇಕು. ಅಷ್ಟರ ತನಕ ಪೇಟೆಯಲ್ಲಿ ಸ್ವೇಚ್ಛಾಚಾರದಿಂದ ನಡೆದ ನನಗೆ ಕೈಗೆ ಕೋಳ ಸಿಕ್ಕಿಸಿ ಲಾಕಪ್ಪಿಗೆ ಕರ ಕೊಂಡು ಹೋದರು. ನಾನು ಮುಖವನ್ನು ವಸ್ತ್ರದಿಂದ ಮುಚ್ಚಿ ಉಷ್ಟ್ರಪಕ್ಷಿಯ ಸ್ವಭಾವದಿಂದ ನಡೆದೆ. ಆದರೆ ಜನರು ನನ್ನನ್ನು ನೋಡದಿದ್ದರೇನು? ನೋಡಿರಬಹುದು. ಅದರಲ್ಲಿ ಎಷ್ಟು ಜನರು ನನ್ನನ್ನು ನೋಡಿಕನಿಕರ ಪಡುವವರು? ಇರಲಿಕ್ಕಿಲ್ಲ. ಎಷ್ಟೋ ಜನರು ಛೀ ಮಾರಿ, ಹಾಕಿರಬಹುದು. ಹಲವರು ನಿಂದಿಸಿರಬಹುದು. ನನ್ನ ವಿಷಯವಾಗಿ ಮನಸ್ಸಿಗೆ ತೋರಿದಂತೆ ಗ್ರಹಿಸಿ ಬಾಯಿಗೆ ಬಂದಂತೆ ಹೇಳಿರಬಹುದು. ಚಿಂತಿಲ್ಲ. ಮಾಡಿದ್ದನ್ನು ಅನುಭವಿಸಿಯೇ ತೀರ ಬೇಕೆಂಬ ನಿಶ್ಚಯದ ಪಲ್ಲವಿಯನ್ನು ಮನಸ್ಸಿನಲ್ಲಿ ಹಾಡಿದೆ. ಬೇಗರಿಬ್ಬರೂ ಹಣವ್ಯಯಿಸಿ ಸಾಕ್ಷಿಗಾರರನ್ನು ಕೂಡಿಸಿದರು. ನಾರ್ಣಪ್ಪ, ಚನ್ನಪ್ಪ, ಮತ್ತು ನೀಲಯ್ಯ ಮೂವರು ಮುಖ್ಯ ಸಾಕ್ಷಿಗಾರರು, ಮೊಕದ್ದಮೆಯ ವಿಚಾರಣೆಯಾಯಿತು.

'ಕಾಳರಾತ್ರಿ ಹೋಗ ಬೇಡವೆಂದರೂ ಪಟೇಲರ ಅಳಿಯನನ್ನು ಹಿಂಬಾಲಿಸಿ ನಡೆದ' ಹೋಟೇಲು ನಾರ್ಣಪ್ಪನ ಸಾಕ್ಷಿ.

'ಹಿಂದಿನಿಂದಲೇ ನಾನೂ ಚನ್ನಪ್ಪನೂ ನಡೆದಿದೆವು. ಐದಾರು ಮಾರು ದೂರ ನಿಂತು ನಮ್ಮ ಕಣ್ಣೆದುರಿಗೇನೆ ಗುಂಡೆಸೆದ' ನೀಲಯ್ಯನ ಹೇಳಿಕೆ.

'ಪಿಶಾಚಿ ತೊಂದರೆ ನಿವಾರಣೆಯಾಯಿತೆಂದು ಹೇಳಿ ಓಡುತ್ತಿರುವಷ್ಟರಲ್ಲಿ ನಾನು ಹಿಡಿದು ಕೋವಿಯನ್ನು ಎಳಕೊಂಡು ಬೊಬ್ಬೆಹಾಕಿ ಊರಿನವರನ್ನು ಬರಮಾಡಿ ನೀಲಯ್ಯನನ್ನು ಪೋಲಿಸು ಠಾಣ್ಯಕ್ಕೆ ಕಳಿಸಿದೆ' ಚನ್ನಪ್ಪನ ಮಾತು. ನನ್ನ ನಿರಪರಾಧದ ಬಗ್ಗೆ ರುಜುವಾತು ಕೊಡಲು ನನಗೆ ಸಾಮರ್ಥ್ಯವುಂಟಾಗಲಿಲ್ಲ ಶಿಕ್ಷೆಯನ್ನು ಅನುಭವಿಸಲು ಸಿದ್ಧನಾದೆ.

''ನ್ಯಾಯಾಧೀಶರು ಜನ್ಮಾಂತರದ ಶಿಕ್ಷೆಯನ್ನು ವಿಧಿಸಿದರು''

ಆ ತನಕ ಮೌನವಾಗಿ ಕೇಳುತ್ತಿದ್ದೆ ನಾನು. ''ಮತ್ತೇನಾಯಿತು'' ಎಂದೆ. 'ಅಂಡಮಾನಿಗೆ ಕರೆದ್ಯೊದರು. ಆದರೆ ಮೊನ್ನೆ ತಾನೆ ನಡೆದ ರಾಜರ ಪಟ್ಟ ಮಹೋತ್ಸವ ಸಮಯ ನನ್ನ ಬಿಡುಗಡೆಯಾಯಿತು. ಅಲ್ಲಿಂದ ಹಿಂತಿರುಗಿ ನಮ್ಮ ಹಳ್ಳಿಗೆ ಬಂದೆ. ಆದರೇನು? ಒಬ್ಬಳೇ ಆದ ನನ್ನ ತಾಯಿಯು ಪುತ್ರ ಶೋಕದಿಂದ ಈ ಮೊದಲೇ ಪರಂಧಾಮವನ್ನೈದಿದ್ದಳು. ಆದ್ದರಿಂದ ಇನ್ನೆಲ್ಲಿಯಾದರೂ ಹೋಗಿ ಮುಂದಿನ ಜೀವನವನ್ನು ಕಳೆಯಬೇಕೆಂದಿರುವೆನು. ನಿಜವಾಗಿ ಹೇಳು. ನಾನು ಅಪರಾಧಿಯೇ?'ಗದ್ಗದಿತ ಕಂಠದಿಂದ ಕೇಳಿದ.

''ಅಲ್ಲ ಕಿಟ್ಟಣ್ಣ''ಕನಿಕರ ಪೂರ್ಣ ಹೃದಯದಿಂದ ನಾನಂದೆ. ನಾವಿಬ್ಬರೂ ಎದ್ದು ನನ್ನ ಮನೆ ಕಡೆಗೆ ಬಂದೆವು. ಅಂದು ಅವನನ್ನು ನನ್ನ ಅತಿಥಿಯಾಗಿ ಮಾಡಿಕೊಂಡೆ.

## ನಿಮಗೆ ಬೇಕೇ—

# ೨೧೩೫ನೇ ಇಸವಿಯ ವರೆಗಿರುವ ಮಗು?

### ೨೦೦ ವರುಷ ಬಾಳಬಹುದಂತೆ!

‘ಶತಾಯುಷ್ಯಮಸ್ತು’ ಎಂಬುದು ಈ ತನಕ ನಮ್ಮ ಗುರುಹಿರಿಯರು ಕೊಡುತ್ತಿದ್ದ ಆಶೀರ್ವಾದ. ‘ದ್ವಿಶತಾಯುಷ್ಯಮಸ್ತು’ ಎಂದು ಡಾ| ಬೆರ್ಜರು ಲೋಕವನ್ನೇ ಆಶೀರ್ವದಿಸುತ್ತಿದ್ದಾರೆ. ‘ಇದ್ದ ಆಯುಸ್ಸನ್ನು ಹೇಗಾದರೂ ಮಾಡಿ ಕಳೆಯಬೇಕಲ್ಲ’ ಎನ್ನುವವರು ಬಹಳ ಮಂದಿ. ಆದರೆ ಆತ್ಮಹತ್ಯೆ ಮಾಡಿಕೊಳ್ಳುವವರಿಗಿಂತ ಸಾಯಲಿಚ್ಛೆಯಿಲ್ಲದವರ ಸಂಖ್ಯೆಯೇ ದೊಡ್ಡದು. ಈ ಬಗೆಯವರೆಲ್ಲಾ ಡಾ| ಬೆರ್ಜರ ಮಾತುಗಳನ್ನು ಕೇಳಿರಿ!

ಮೆಲ್ಲ ನಡೆದರೆ ಗುರಿಮುಟ್ಟಲು ಒಂದು ಗಂಟೆಯ ಬದಲಿಗೆ ಎರಡು ಘಂಟೆಬೇಕಾಗುವದೆಂದು ನಮಗೆಲ್ಲಾ ಗೊತ್ತು. ಈ ರೀತಿಯು ನಮಗೆ ಗೊತ್ತಿರುವುದೆಂದರೆ ಊರಿಂದೂರಿಗೆ ಹೋಗುವ ಹಾದಿಯ ಮಟ್ಟಿಗೆ ಮಾತ್ರ. ಹಾಗೆಯೇ ಮೆಲ್ಲ ನಡೆದರೆ ನಮ್ಮ ವೈಕುಂಠಕ್ಕೋ ಕೈಲಾಸಕ್ಕೋ ಹೋಗಲು ೨೦೦ ವರ್ಷಗಳು ಬೇಕಾಗುವವೆಂದು ಡಾ| ಲುವಿಸ್ ಬೆರ್ಜರು ಹೇಳುತ್ತಾರೆ. ನಾವು ೨೦೦ ವರ್ಷ ಬಾಳಬಹುದಂತೆ! ‘ಮನುಷ್ಯನು ಅವಸರವಸರದಿಂದ ದುಡಿದು ತನ್ನ ಜೀವಮಾನವನ್ನು ಬೇಗನೆ ಅಂತ್ಯಮಾಡಿಕೊಳ್ಳುತ್ತಾನೆ’ ಎಂದು ಡಾ| ಬೆರ್ಜರ ಅಭಿಪ್ರಾಯ.

“ನಾವು ಪ್ರಕೃತಿಯ ಆಧೀನದಲ್ಲಿದ್ದು ಅದರ ಸ್ವಭಾವಕ್ಕನುಸಾರವಾಗಿ ಬಾಳಲು ಕಲಿತರೆ ೨೦೦ ವರ್ಷವೇ ನಮ್ಮ ಆಯುಸ್ಸಿನ ಸರ್ವಸಾಧಾರಣ ದಾಖಲೆಯಾಗಿ ನಿಲ್ಲುವದು. ಇನ್ನೂರು ವರ್ಷಗಳಲ್ಲಿ ಮೊದಲಿನ ನೂರು ವರ್ಷಗಳನ್ನು ನಾವು ಕಲಿಯುವುದರಲ್ಲಿ ಕಳೆಯಬೇಕು. ಮಿಕ್ಕ ನೂರು ವರ್ಷಗಳನ್ನು ನಮ್ಮ ಕಿರಿಯರಾದ ನೂರು ವರುಷದೊಳಗಿನ ತರುಣ ಜನಾಂಗಕ್ಕೆ ಕಲಿಸುವದರಲ್ಲಿ ಕಳೆಯಬೇಕು” ಡಾಕ್ಟರ್ ಬೆರ್ಜರ ಸೂಚನೆಯಿದು!

“ಜನರು ಪ್ರತಿಯೊಂದು ಕೆಲಸದಲ್ಲಿಯೂ ಅವಸರ ಪಡುವದರಲ್ಲೇ ಇದ್ದಾರೆ. ತಮ್ಮ ಕೂಸುಗಳು ಬೇಗನೇ ಬೆಳೆದು ಹೋಗುವಂತೆ ಮಾಡುವವರು ಅವರೇ. ಮಕ್ಕಳಿಗೆ ಬಹು ಬೇಗನೇ ಮಾತಾಡುವದಕ್ಕೂ ನಡೆಯುವದಕ್ಕೂ ಕಲಿಸುತ್ತಾರೆ, ಅವುಗಳ ಬುದ್ಧಿಯು ಬೇಗನೆ ಬೆಳೆಯುವಂತೆ ಮಾಡುತ್ತಾರೆ. ಹೀಗಾಗಿ ಅವಕ್ಕೆ ಬೇಗನೆ ಪ್ರಾಯ ಬಂದು ಬೇಗನೆ ಸಾಯುವಂತಾಗುತ್ತದೆ.”

ಡಾ| ಬೆರ್ಜರು ಈ ತತ್ವವನ್ನು ಹೇಳಿ, ಅದಕ್ಕೆ ಕಾರಣ ಮಾತ್ರ ಕೊಟ್ಟು ಕುಳಿತಿಲ್ಲ. ಅದನ್ನು ಕಾರ್ಯತಃ ತೋರಿಸುವುದರಲ್ಲಿಯೂ ಇದ್ದಾರೆ. ಅವರ ಮೂರು ವರ್ಷದ ಮಗನನ್ನು ಈ ಮಾದರಿಯಲ್ಲಿಯೇ ಇಟ್ಟಿದ್ದಾರೆ. ಮೂರು ವರ್ಷದ ಮಗುವು ನೋಡುವಾಗ ಹುಟ್ಟಿ ಹದಿನೆಂಟು ತಿಂಗಳುಗಳು ಮಾತ್ರವಾದಂತೆ ಕಾಣುತ್ತದೆ.

“ಮೂವತ್ತು ವರ್ಷ ಪ್ರಾಯವಾಗುವಾಗ ಇವ ಇಪ್ಪತ್ತು ವರ್ಷವಾದವನಂತೆ ತೋರಲಿಕ್ಕಿದ್ದಾನೆ. ಹಾಗೆಯೇ ಅವನ ತಾರುಣ್ಯವು ಉದ್ದುದ್ದಕ್ಕೆ ಬೆಳೆದು ದೀರ್ಘಕಾಲದ ವರೆಗೆ ಉಳಿಯಲಿರುವದು” ಎಂದು ಬೆರ್ಜರು ಹೆಗ್ಗಳಿಕೆಯಿಂದ ಹೇಳುತ್ತಿದ್ದಾರೆ. ಯುದ್ಧ, ಅವಘಡ ಮೊದಲಾದ ಅಪಮೃತ್ಯುವೊದಗದಿದ್ದರೆ ತನ್ನ ಮಗನು ಸುಮಾರು ಇನ್ನೂರು ವರುಷಗಳವರೆಗೆ ಬದುಕಲಿರುವನೆಂದು ಬೆರ್ಜರ ಭರವಸೆ.

ಡಾ| ಬೆರ್ಜರೀಗ ತನ್ನ ವಿದ್ಯಾರ್ಥಿಗಳೊಂದಿಗೆ ಪ್ರಶಾಂತ ವಾತಾವರಣವಿರುವ ಪನಮಾ ಎಂಬಲ್ಲಿ ವಾಸಿಸುತ್ತಿದ್ದಾರೆ. ತನ್ನ ಮಗನಿಗೆ ಪಟ್ಟಣದ ಯಾವುದೇ ವಿಧದ ತೀವ್ರಗಾಮಿತ್ವವು ಸೋಂಕದಂತೆ ಬಹಳ ಮುಂಜಾಗೃತೆಯಿಂದಿದ್ದಾರೆ.

ಆದರೆ ಆತ್ಮಹತ್ಯೆಯ ಸಂಖ್ಯೆಯು ದಿನದಿಂದ ದಿನಕ್ಕೆ ಬೆಳೆಯುತ್ತಿರುವ ಪ್ರಪಂಚಕ್ಕೆ ದೀರ್ಘಜೀವನವು ಬೇಕಾಗಿರುವದೇ ಎಂಬುದೊಂದು ಪ್ರಶ್ನೆ.

---

# ಮರ್ಜಿ

ಕತೆಗಾರ---ಹರಿದಾಸ---ಮೂಲ್ಕಿ

"ನಮಸ್ಕಾರ ರಾಯರೇ" "ನಮಸ್ಕಾರ. ನಿಮ್ಮ ಪರಿಚಯವಾಗಲಿಲ್ಲವಲ್ಲ?" "ನನಗೆ ಮಂಗಲಪಾಡಿಯಲ್ಲಿ. ತಾವು ಕಳೆದಬಾರಿ ವೋಟಿನ ಸಲುವಾಗಿ ನಮ್ಮ ಊರಿಗೆ ಬಂದಾಗ ನನ್ನಲ್ಲೆ ಎರಡು ದಿನಗಳ ಮೊಕ್ಕಾಂ ಮಾಡಿದ್ದಿರಿ." "ಅಹಾ! ಹೀಗೇನು? ತಮ್ಮ ಹೆಸರು?" "ರಾಮರಾಯ". "ಇರಬಹುದು ನೋಡಿ. ಸಾವಿರ ವಿಚಾರಗಳಲ್ಲಿ ತಲೆಯೋಡುತ್ತಿರುವುದರಿಂದ ಈಗ ಹೇಳಿದ ಮಾತು ಇನ್ನೊಂದು ಕ್ಷಣದಲ್ಲೇ ಮರೆತು ಹೋಗುವುದು." "ಪಾಪ! ಸಾರ್ವಜನಿಕ ಕೆಲಸಗಾರರ ಸ್ಥಿತಿಯೇ ಹೀಗೆ". "ಇರಲಿ. ತಾವೇನು ಕಾರ್ಯಾರ್ಥಿಗಳಾಗಿ ಬಂದಿರಿ?". "ಸ್ವಾಮಿ, ನಿರುದ್ಯೋಗ ಪೀಡಿತನಾದ ನಾನು ಸಂಸಾರ ಸಾಗಿಸದವನಾಗಿ ಈ ಶಹರಿನಲ್ಲಾದರೂ ಒಂದು ಉದ್ಯೋಗ ಸಿಕ್ಕೀತೇ ಎಂಬಾಸೆಯಿಂದ ಇಲ್ಲಿಗೆ ಈ ದಿನ ಪ್ರಾತಃಕಾಲ ಬಂದೆನು. ನಮ್ಮ ಶ್ಯಾನುಭೋಗರನ್ನು ಹಿಡಿದರೆ ನನ್ನ ಅಪೇಕ್ಷೆ ಪೂರೈಸಬಹುದೆಂದು ನನ್ನ ಹಿತಚಿಂತಕನೊಬ್ಬನು ಹೇಳಿದನು. ಅವರಿಗೂ ನಿಮಗೂ ಬಹಳ ಸ್ನೇಹವಿರುವುದರಿಂದ ತಾವು ಮನಸ್ಸುಮಾಡಿದರೆ ನನ್ನ ಕೆಲಸವು ಮತ್ತೂ ಸುಲಭವಾದೀತೆಂಬಾಸೆಯಿಂದ ತಮ್ಮ ಬಳಿ ಬಂದಿರುವೆನು". "ಪರವಿಲ್ಲ. ಸಾಯಂಕಾಲ ೫ ಗಂಟೆಗೆ ಅವರಲ್ಲಿಗೆ ಹೋಗುವಾ. ಆಗದೆ?" "ಸಂತೋಷ. ಹಾಗಾದರೆ ೫ ಗಂಟೆಗೆ ಬರುತ್ತೇನೆ. ನಮಸ್ಕಾರ." "ನಮಸ್ಕಾರ."

ಇಷ್ಟು ಸುಲಭವಾಗಿ ರಾಯರು ದೊಡ್ಡ ಮನಸ್ಸು ಮಾಡಬಹುದೆಂದು ರಾಮುವೆಣಿಸಿದ್ದಿಲ್ಲ. ಪ್ರಸಿದ್ಧ ಪುರುಷರು, ಶ್ರೀಮಂತರು, ಬಡವನೊಬ್ಬನ ಮಾತನ್ನಿಷ್ಟು ಮುತುವರ್ಜಿಯಿಂದ ನಡೆಸುವುದೆಂದರೆ ಆಶ್ಚರ್ಯವಲ್ಲವೇ? ೫ ಗಂಟೆಗೆ ಸರಿಯಾಗಿ ರಾಮುವು ಆಫೀಸಿಗೆ ಬಂದನು. ಬರೆಯುತ್ತ ಕುಳಿತಿದ್ದ ರಾಯರು ಕುಳಿತುಕೊಳ್ಳಲು ಹೇಳುವಷ್ಟು ಕೂಡಾ ಪುರುಸೊತ್ತಿಲ್ಲದವರಾಗಿದ್ದರು. ನಿಂತು ಬೇಸತ್ತ ರಾಮುವು ತಾನಾಗಿ ಬೆಂಚಿಯೊಂದರಲ್ಲಿ ಕುಳಿತನು. ಆಗ ರಾಯರ ಮುಗುಳುನಗುವಿನ ಮುಖವೊಮ್ಮೆ ಆತನ ಕಡೆಗೆ ತಿರುಗಿ ಪುನಹ ಮೊದಲಿನಂತಾಯಿತು. ಅರ್ಧ ಗಂಟೆ ಹೊಡೆದುದಾಯಿತು. ಗಂಟೆ ಆರಾದರೂ ರಾಯರ ಬರವಣಿಗೆ ಮುಗಿದಿಲ್ಲ. ಕಾದು ಸೋತ ರಾಮುವು, ಒಮ್ಮೆ ರಾಯರ ಬರವಣಿಗೆಯು ಮುಗಿದು ತನ್ನ ಕಾರ್ಯದ ಜಯಾಪಜಯ ತಿಳಿಯುವಂತಾಗಲೆಂದು ಕುತೂಹಲ ಪಡುತ್ತ ಭಗವಂತನನ್ನು ಪ್ರಾರ್ಥಿಸುತ್ತಿದ್ದನು. ಅಷ್ಟರಲ್ಲಿ ರಾಯರು ಬರೆಯುವುದನ್ನು ಮುಗಿಸಿ ತನ್ನ ಕೋಟನ್ನು ಸಿಕ್ಕಿಸಿಕೊಂಡು ಅವಸರದಿಂದ ಎಲ್ಲಿಗೋ ಹೋಗಿಬಿಟ್ಟರು. ಅವರನ್ನು ಹಿಂಬಾಲಿಸಿ ತನ್ನ ವಿಚಾರವನ್ನರುಹಬೇಕೆಂದಿದ್ದ ರಾಮುವು ಏಳುವಷ್ಟರಲ್ಲಿ ರಾಯರು ತನ್ನ ಕಾರಿನಲ್ಲಿ ತ್ತಲೋ ಹೋಗಿಯಾಗಿತ್ತು. ಮೊದಲೇ ಬೇಸರಗೊಂಡಿದ್ದ ರಾಮುವು ರಾಯರ ಈ ವರ್ತನೆಗಾಗಿ ಮನಸ್ಸಿನಲ್ಲೇ ಮರುಗಿದನಾದರೂ, ಈಗ ಮರಳಿ ಬರಬಹುದೆಂಬ ಸಮಾಧಾನ ಮಾಡಿಕೊಂಡು ಅಲ್ಲೇ ಕುಳಿತನು. ದುರ್ದೈವದಿಂದ ೮ ಗಂಟೆಯ ತನಕ ನಿರೀಕ್ಷಿಸಿಕೊಂಡಿದ್ದರೂ ರಾಯರು ಹಿಂದಿರುಗಲಿಲ್ಲ. ಆಫೀಸಿನಲ್ಲಿದ್ದವರೊಬ್ಬೊಬ್ಬರಾಗಿ ಹೋದ ತರುವಾಯ ಪೇದೆಯು ಬಾಗಿಲುಗಳನ್ನೆಲ್ಲ ಮುಚ್ಚಿ "ರಾಯರೇ, ಯಾರನ್ನು ಕಾದುಕೊಂಡಿರುವಿರಿ?" ಎಂದು ಪ್ರಶ್ನಿಸಿದನು. ನಿರಾಶೆಯಿಂದ ರಾಮುವು "ರಾಯರನ್ನು" ಎಂದುತ್ತರವನ್ನಿತ್ತನು. ಅದನ್ನು ಕೇಳಿದ ಪೇದೆಯು ನಗುತ್ತ "ಅವರಿನ್ನು ನಾಳೆ ಬರುವುದು. ನಾವು ಹೋಗೋಣ. ಬಾಗಿಲು ಹಾಕಬೇಕಾಗಿದೆ" ಎಂದನು. ತಲೆಗೆ ತಣ್ಣೀರು ಚೆಲ್ಲಿದಂತಾಯ್ತು ಪಾಪ ರಾಮುವಿಗೆ. "ಅವರೊಡನೆ ಅಗತ್ಯ ಕೆಲಸವಿದ್ದಿತು" ಎಂದು ದೈನ್ಯತೆಯೊಡನೆ ಹೇಳಿದನು. ದಯಾಳುವಾದ ಪೇದೆಯು "ಹಾಗಾದರೆ ಅವರ ಮನೆಗೆ ಬೀಗದ ಕೈ ಕೊಡಲಿಕ್ಕಾಗಿ ಹೋಗುತ್ತೇನೆ. ನನ್ನೊಡನೆ ಬನ್ನಿರಿ" ಎಂದು ಹೇಳಿ ಬಾಗಿಲನ್ನು ಭದ್ರಪಡಿಸಿ ರಾಮುವನ್ನು ಸಂಗಡ ಕರೆದುಕೊಂಡು ಹೋದನು. ರಾಯರು ಮನೆಯಲ್ಲಿ easy chair (ಒರಗುವ ಕುರ್ಚಿ)ನಲ್ಲಿ ಬಿದ್ದುಕೊಂಡು ಪೇಪರು ಓದುತ್ತಿದ್ದರು. ರಾಮುವು ದೊಡ್ಡವರಿಗೆ ಕೊಡತಕ್ಕ ಮರ್ಯಾದೆಯನ್ನಿತ್ತು ನಿಂತುಕೊಂಡನು. "ಓಹೋ, ನಿಮ್ಮನ್ನಲ್ಲಿ ಬಿಟ್ಟು ಬಂದುದು ನೆನಪಿನಲ್ಲಿದ್ದಿಲ್ಲ. ಪರವಿಲ್ಲ. ನಾಳೆ ೧೦ ಗಂಟೆಗೆ ಆಫೀಸಿಗೆ ಬನ್ನಿ. ಆಗದೇ?" ಎಂದು ಮುಗುಳುನಗೆಯೊಡನೆ ಹೇಳಿದರು ರಾಯರು. ಈ ನಗೆಯೇ ಬಡವನಿಗೆ ದಗೆ ಎಂದು ತಿಳಿಯದ ರಾಮುವು ಮರು ಮಾತನಾಡದೆ ನಮಸ್ಕರಿಸಿ ಹೋದನು. ಪರಿಚಯವಿಲ್ಲದ ಆ ಊರಲ್ಲಿ ಆ ರಾತ್ರಿಯನ್ನು ಕಳೆದ ರಾಮುವಿನ ಕಷ್ಟವು ದೇವರಿಗೇ ಪ್ರೀತಿ.

ಉದ್ಯೋಗಾನ್ವೇಷಣಕ್ಕಾಗಿ ಬಂದಿದ್ದ ರಾಮುವಿನಲ್ಲಿ ಹೆಚ್ಚಿನ ಹಣವಿದ್ದಿಲ್ಲ. ಅಂದಿನ ರಾತ್ರಿಯನ್ನು ಕಳೆದಾಗ

ಅವನ ಕಿಸೆಯೂ ಬರಿದಾಗಿತ್ತು. ಹೇಗೂ ತನ್ನ ಕಾರ್ಯ ಫಲಿಸಿದರೆ ಮುಂದೆ ತೊಂದರೆಯಾಗಲಾರದೆಂಬ ಭಾವೀ ಸುಖಚಿಂತನೆಯಿಂದ ಆ ವಿಚಾರವನ್ನು ಮರೆತು ಮರು ದಿವಸ ಹತ್ತು ಗಂಟೆಗೆ ಸರಿಯಾಗಿ ರಾಯರ ಆಫೀಸಿಗೆ ಬಂದನು. ಅಲ್ಲಿದ್ದ ಪೇದೆಯು ಇವನನ್ನು ಒಂದಾಸನದಲ್ಲಿ ಕುಳಿತುಕೊಳ್ಳ ಹೇಳಿದನು. ರಾಮುವು ರಾಯರ ಆಗಮನವನ್ನೇ ನಿರೀಕ್ಷಿಸುತ್ತಾ, ಒಂದು ಕಡೆ ಪರ ಊರಿನ ಕಷ್ಟ-ಮತ್ತೊಂದೆಡೆ ಹಣದ ಅಭಾವ-ಮಗುದೊಂದೆಡೆ ದೊಡ್ಡವರ ಸಹವಾಸದ ಕಷ್ಟ—ಇತ್ಯಾದಿಗಳನ್ನು ಯೋಚಿಸುತ್ತಿದ್ದನು. ೧೧ ಗಂಟೆ ದಾಟಿತಾದರೂ ರಾಯರಾಗಮನವಿಲ್ಲ. ನಿರಾಶೆಗೊಂಡು ಪೇದೆಯನ್ನು ಕರೆದು "ರಾಯರೇಕೆ ಇನ್ನೂ ಬರಲಿಲ್ಲ?" ಎಂದು ಪ್ರಶ್ನಿಸಿದನು. ಇವನ ಬೋಳೆ ಸ್ವಭಾವಕ್ಕಾಗಿ ಮರುಕಗೊಂಡ ಪೇದೆಯು "ಸ್ವಾಮಿ, ನಿಮಗೆ ರಾಯರನ್ನು ಕಾಣಲೇ ಬೇಕೆಂದಾದರೆ ಇನ್ನು ಮೂರು ದಿನಗಳ ನಂತರ ಬನ್ನಿರಿ. ಸದ್ಯ ಅವರು ಕಾರ್ಯವಿಶೇಷದಿಂದ ಈ ದಿನ ಪ್ರಾತಃಕಾಲ ಬೆಂಗಳೂರಿಗೆ ಹೋಗಿರುವರು" ಎಂದನು. ರಾಮುವಿಗೆ ಇಲ್ಲದ ದುಃಖ ಬಂದಿತು. ಗಳಗಳನೆ ಕಣ್ಣೀರು ಸುರಿಸುತ್ತ ಹೊರಡಲನುವಾದನು. ಪೇದೆಯು ತಡೆದು "ಅಳುವುದೇಕೆ?" ಎಂದು ಪ್ರಶ್ನಿಸಿದನು. ಕಣ್ಣೀರನ್ನೊರಸುತ್ತ ರಾಮುವು "ರಾಯರನ್ನು ನಂಬಿ ಮೋಸಹೋದೆನು. ಊರಿಗೆ ಹೋಗಲಿಕ್ಕೆ ಕಾಸಿಲ್ಲದವನಾದೆನು. ನನಗಿಲ್ಲಾರ ಪರಿಚಯವೂ ಇಲ್ಲ" ಎಂದುತ್ತರವನ್ನಿತ್ತನು. ಇದನ್ನು ಕೇಳಿದ ಪೇದೆಯು ತನ್ನ ಜೇಬಿನಿಂದ ಒಂದು ರೂಪಾಯಿಯನ್ನಿತ್ತು "ಸಿಕ್ಕಿದಾಗ ಪರತು ಕೊಟ್ಟರೆ ಸಾಕು" ಎಂದು ಹೇಳಿದವನೇ ಉತ್ತರ ನಿರೀಕ್ಷಿಸದೆ ಒಳಗೆ ಹೋಗಿ ಬಿಟ್ಟನು. ರಾಮುವು ಹಣ ಸಿಕ್ಕಿದುದಕ್ಕಾಗಿ ಸಂತೋಷವನ್ನೂ, ರಾಯರ ವಂಚನೆಗಾಗಿ ದುಃಖವನ್ನೂ, ಅನುಭವಿಸುತ್ತ ಇಬ್ಬರ ಮರ್ಜಿಯನ್ನೂ ತುಲನ ಮಾಡುತ್ತ ತನ್ನ ಮನೆಯ ದಾರಿ ಹಿಡಿದನು.

ಲೋಕೋ ಭಿನ್ನ ರುಚಿ?.

---

# ವಾರದ ಪಂಚಾಂಗ

## ಬಹುಧಾನ್ಯ ಸಂ|ರದ ಆಶ್ವಿನ ಶುಕ್ಲಪಕ್ಷ ದಕ್ಷಿಣಾಯನಂ ಶರದೃತುಃ

**ಕನ್ಯಾ (ನಿರ್ನಾ೮) ೯ರಿಂದ ೧೬ರ ವರೆಗೆ. ಮಹಾನಕ್ಷತ್ರ— ಉತ್ತರಾ— ಹಸ್ತಾ**

### ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 25 | ೨ | ೭೪೮\|\|\| | ಹ್ತ೫\|\|\| | ಬ್ರ೧೩\|\|\| | ಬಾ೧೯\| | ೨೫\|\|\| | ೫೦ | ತುಲಾಚ೩೬ ಉ್ತ೧ಬು೨ವಿ೨ಶು೪೫§ [§ ಪ್ರೀ೨ ಚಂದ್ರದರ್ಶನಂ |
| 26 | ೩ | ಚ೪೮\| | ಚಿ೬\| | ಐ೧೦ | ತೈ೧೮\| | ೨೦\|\| | ೪೫\| | ಉ್ತ೨ಕನ್ಯಾಬು೫೧ಪ್ರಾಗಸ್ತಂಬುಧಃ |
| 27 | ೪ | ಕು೪೯\| | ಸ್ವಾ೭\|\| | ವೈ೭\| | ವ೧೮\|\|\| | ೨೨\|\| | ೪೭\|\|\| | ಹಸ್ತಾರ್ಕಃ\|ವೃಶ್ಚಿಕೆಚ೫೫ ಪ್ರದೋ |
| 28 | ೫ | ಬು೫೧\|\| | ವಿ೧೦\|,\| | ವ್ಯಿ೫\|\| | ಬ೨೦\| | ೨೧\| | ೪೭ | ಹು೩ಕು೯ಉ್ತ೩ಬು೪೪ಲಲಿತಾ೫ |
| 29 | ೬ | ಗು೫೪\|\|\| | ಅ್ನ೧೪\|\|\| | ಪ್ರೀ೪\|\|\| | ಕೌ೨೩ | ೩೦ | ೫೬ | ದಗ್ಧಯೋ೬ [‡ಪುಸ್ತಕಪೂಜಾ |
| 30 | ೭ | ಶು೫೯ | ಜ್ಯೆ೨೦ | ಆ೫ | ಗ೨೬\|\|\| | ೪೨ | ೦ | ಹ್ತ೨ರ೨೩ಧನುಚ೨೦ಉ್ತ೪ಬು೫೯* [* ವಿ೩ಶುಂಪ್ರದೋಷಃ |
| 1 | ೮ | ಶ೬೦ | ಮೂ೨೬ | ಸೌ೬ | ಭ೩೧\|\| | ೫೨\|\| | ೮\| | ವಿ೨ರಾಭ೪ಕೆ೪೫ ಮೂಲಾನಕ್ಷತ್ರ‡ |

### ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 25 | ೨ | ರ೪೨\| | ಚಿ೫೮\|\| | ಬ್ರ೬\| | ಬಾ೧೩\|\|\| | ೧೯ | ೪೨\|\|\| | ತುಲಾಚ೯ ಉ್ತ೧ಬು೨೪ ಚ. ದ. |
| 26 | ೩ | ಚ೪೧\| | ಸ್ವಾ೫೯\|\| | ಐ೧\|\|\| ಉ್ವ೫೬\|\|\| | ತೈ೧೧\|\|\| | ೧೩ | ೩೭\|\| | ಹಸ್ತೇ೯ರ್ಕಃ೪೩ ಜ್ಞಾಸ್ತ್ತಃಪೂರ್ವೆ* [* ಶಾಬಾನ್ |
| 27 | ೪ | ಕು೪೨ | ವಿ೬೦ | ವ್ಯಿ೫೭ | ವ೧೧\|\| | ೧೪\|\| | ೩೯\|\|\| | ವೃಶ್ಚಿಕೆಚ೪೭ ಕನ್ಯಾಬುಧಃ೧೬ |
| 28 | ೫ | ಬು೪೪\|\|\| | ವಿ೨\|\|\| | ಪ್ರೀ೫೬\|\|\| | ಬ೧೩\| | ೧೩\|\| | ೩೯\| | ಪೂ೩ಕು೧೭ ವಿ೩ಶು೩೭ ಲಲಿತಾ೫ |
| 29 | ೬ | ಗು೪೮\|\|\| | ಅ್ನ೭\|\| | ಆ೫೭\|\|\| | ಕೌ೧೬\|\|\| | ೨೩ | ೪೯\| | ಉ್ತ೩ಬು೬ |
| 30 | ೭ | ಶು೫೪\| | ಜ್ಯೆ೧೩\|\| | ಸೌ೫೯\|\| | ಗ೨೧\|\| | ೩೭ | ೦ | ಹ೨ರ೭ಚಾಪೆಚ೧೩\|\|ಉ್ತ೪ಬು೫೭¶ [¶ ವ.ಗ. ಮ.ಗುರುಃ೧೪ಶಾ·ಪೂ |
| 1 | ೮ | ಶ೬೦ | ಮೂ೨೦\|\| | ಶೋ೬೦ | ಭ೨೭\| | ೪೭\|\| | ೨ | ಒಕ್ಟೋಬರ. |

# ಈ ವಾರದಲ್ಲಿ ನಿಮ್ಮ ಭವಿಷ್ಯ ಹೇಗಿದೆ?



**ತಾರೀಕು ೨೫-೯-೧೯೩೮ರಿಂದ**
**ತಾರೀಕು ೧-೧೦-೧೯೩೮ರ ವರೆಗೆ.**



**ಮೇಷ:—**

"ಸುಖಂ ಹಿಂ ದುಃಖಾನ್ಯನುಭೂಯ ಶೋಭತೇ ಘನಂಧಕಾರೇಷ್ವಿವ ದೀಪದರ್ಶನಂ" ಒಳ್ಳೆ ಕಾರ್ಮುಗಿಲಿನಿಂದ ಕೂಡಿದ ಕೃಷ್ಣಪಕ್ಷದ ರಾತ್ರಿಯಲ್ಲಿ ಕಗ್ಗತ್ತಲೆಯಲ್ಲಿ ಪ್ರಕಾಶಮಾನವಾದ ದೀಪವು ಸಿಕ್ಕಿದರೆ ಯಾವ ರೀತಿ ಆ ಬೆಳಕಿನ ಉಪಯೋಗ ಯಾ ಪ್ರಭಾವವು ಕಂಡು ಬರುವುದೋ ಅಂತೆಯೇ ಸುಖದ ಸಂಪೂರ್ಣ ಸಾರವನ್ನನುಭವಿಸಬೇಕಾದರೆ ವಾ ಅನುಭವಕ್ಕೆ ಸಿಗಬೇಕಾದರೆ ಶತ್ಪೂರ್ವದಲ್ಲಿ ಚೆನ್ನಾಗಿ ದುಃಖದ ಅರಿವನ್ನರಿತಿರಬೇಕು. ಈ ತೆರನಾದ ಯೋಗವು ನಿಮಗೀಗ ಬಂದಿದೆಯೆಂದು ಧಾರಾಳವಾಗಿ ಹೇಳಬಹುದು. ಕೆಲವು ಸಮಯಗಳ ಹಿಂದೆ ನೀವು ಬಹಳ ಕಷ್ಟಕ್ಕೀಡಾಗಿದ್ದಿರಿ. ಆದರೆ ಆ ಕಾಲವು ಹಿಂದಾಯಿತು. ಆದ ಕಾರಣದಿಂದಲೇ ನೀವು ನಿರೋಗಿಗಳಾಗುವಿರಿ. ಶತ್ರುಗಳು ಯಾವ ವಿಧದಿಂದಲೂ ನಿಮಗೆ ಪೀಡಿಸಲು ಶಕ್ತರಾಗಿಲ್ಲ. ಸರ್ವತ್ರ ಕಾರ್ಯಗಳಲ್ಲಿ ವಿಜಯಿಗಳಾಗುವಿರಿ. ಜನರಿಂದ ಸ್ಥಾನಮಾನಗಳು ದೊರೆಯುವವು. ನಿಮ್ಮ ನಿಮ್ಮ ಉದ್ಯೋಗದಲ್ಲಿ ಅಭಿವೃದ್ಧಿಯ ಕಾಲವು ಸಮೀಪಿಸಿದೆ. ವ್ಯಾಪಾರಾದಿ ಉದ್ಯೋಗಗಳಲ್ಲೂ ಇತರ ವ್ಯವಹಾರ ಭಾಗದಲ್ಲೂ ಕುಂಠಿ ಧನಲಾಭವಾಗುವ ಸಂಭವವಿದೆ. ಏಳೂವರೆ ಶನಿಯಿಂದಾಗಿ ಮತ್ತು ಶುಕ್ರನಿಂದಾಗಿ ಸ್ತ್ರೀ ಮೂಲಕವಾದ ಅನಿಷ್ಟ, ಧನವ್ಯಯವಾಗತಕ್ಕ ಅನಿಷ್ಟ ಸಮೂಹಗಳು ತಾ 28ರಿಂದ 1 ವರೆಗಿನ ದಿನಗಳಲ್ಲಿ ಸಂಭವಿಸಲು ಕಾರಣವಿದೆ. ಎಚ್ಚರಿಕೆ.

**ವೃಷಭ:—**

"ಕೆಡುವ ಕಾಲಕ್ಕೆ ಬುದ್ಧಿಯಿಲ್ಲ, ಸಾಯುವ ಕಾಲಕ್ಕೆ ಮದ್ದಿಲ್ಲ"ವೆಂಬಂತಹ ಸ್ಥಿತಿಯು ಬಂದೊದಗಿದೆ. ಯಾವ ಭಾಗದಲ್ಲೂ ನಿಮಗೆ ಹಿತವಿಲ್ಲವೆಂದರೆ ತಪ್ಪಾಗದು. ಉದರರೋಗ, ತಾಪಜ್ವರ, ಇವುಗಳಿಂದ ದೇಹಕ್ಕೆ ಸುಖವಿಲ್ಲವು. ಶತ್ರುಗಳ ಪೀಡೆಯಿಂದಲೂ ಗೃಹಚ್ಛಿದ್ರಗಳಿಂದಲೂ, ದುರ್ಜನರ ಸಹವಾಸದಿಂದಲೂ ಇನಿತು ಮಾನಸಿಕ ಸುಖವಿಲ್ಲವು. ಮನಸ್ಸಿಗೆ ಅಂಟಿಕೊಂಡ ಭೀತಿಯಿಂದಲೂ ವೈರಿಗಳ ಉಪದ್ರದಿಂದಲೂ ನೀವು ಕೈಗೊಂಡ ಕಾರ್ಯದಲ್ಲಿ ನಿಮಗೆ ಜಯ ಸಿಗುವಂತಿಲ್ಲವು. ನಿಮ್ಮ ಮಾತಿನಲ್ಲಿ ನಿಷ್ಠುರತೆಯೇ ಇರುವುದರಿಂದಾಗಿ ಸಕಲರಲ್ಲೂ ಕಲಹವಾಗುವುದು. ಶ್ರೇಯಸ್ಸನ್ನು ಬಯಸತಕ್ಕವರು ನವಗ್ರಹ ಸ್ತೋತ್ರ ಪಾರಾಯಣಾದಿಗಳನ್ನು ಮಾಡುವುದು ಅತ್ಯಗತ್ಯ. ತಾ 25 ಮತ್ತು 30, 1 ಈ ದಿನಗಳು ಕೆಟ್ಟವಿರುವುದರಿಂದ ಪ್ರವಾಸದಲ್ಲಿ ಅನಿಷ್ಟವೂ, ರೋಗದ ಪ್ರತಾಪವೂ ಹೆಚ್ಚಾಗುವದು.

**ಮಿಥುನ:—**

"ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ। ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ದುರಾತ್ಮನಾಂ॥" ಸಜ್ಜನರಿಗೆ ಮನೋವಾಕ್ಕಾಯಗಳಲ್ಲಿ ಒಂದೆ ವಿಧವಾದ ಸಂಕಲ್ಪವಿರುವುದು. ದುರ್ಜನರ ಸಂಕಲ್ಪವು ಮನೋವಾಕ್ಕಾಯಗಳಲ್ಲಿ ಒಂದೊಂದು ತೆರನಾಗಿರುವುದು. ಸಜ್ಜನರಿಗೂ ದುರ್ಜನರಿಗೂ ಇರತಕ್ಕ ಅಭ್ಯಂತರವು ಇಷ್ಟೆ. ಈ ಪ್ರಕಾರವಾಗಿರತಕ್ಕ ಎರಡನೆಯವರ ಪಂಥವನ್ನನುಸರಿಸಿ ನೀವು ಮನಸ್ಸಿನಲ್ಲೊಂದು ರೀತಿ ನೆನೆಸಿಕೊಂಡು, ಬಾಯಲ್ಲಿ ಮತ್ತೊಂದು ವಿಧವಾಗಿ ಹೇಳುತ್ತಾ ಕಾರ್ಯದಲ್ಲಿ ಇನ್ನೊಂದು ಮಾರ್ಗದಲ್ಲಿ ಪ್ರವರ್ತಿಸುವುದರಿಂದಲೇ ನಿಮಗೀ ವಾರವು ಕೆಲವಂಶ ಹಾನಿದಾಯಕವಾಗಿರುವುದು. ಆದ ಕಾರಣದಿಂದಲೇ ಈ ವಾರದಲ್ಲಿ ನಿಮ್ಮ ಆಕಾಂಕ್ಷೆಗಳೊಂದೂ ಈಡೇರುವುದಿಲ್ಲವು. ರಾಜಭಯಕ್ಕೂ ಶತ್ರುಗಳ ಪೀಡೆಗೂ ಗುರಿಯಾಗತಕ್ಕ ಕಾರ್ಯವನ್ನು ಮಾಡಿ ಮಾನಹಾನಿ ಮತ್ತು ಅಪಕೀರ್ತಿಗೆ ಗುರಿಯಾಗುವಿರಿ. ಆರೋಗ್ಯದ ಮಟ್ಟಿಗೆ ಅಷ್ಟೊಂದು ಒಳ್ಳೆಯದಿಲ್ಲವು. ಆದರೂ ಬಂಧುಜನರ ಸಮಾಗಮದಿಂದಲೂ ಮಿತ್ರರ ಸಹಾಯದಿಂದಲೂ ಮನಸ್ಸಿಗೆ ಸ್ವಲ್ಪ ಸಂತೋಷವಿದೆ. ತಾ. 28ರಿಂದ 1ರ ತನಕದ ದಿನಗಳು ಉತ್ತಮವಿರುವುದರಿಂದ ಶತ್ರುನಾಶ, ಸ್ತ್ರೀಸುಖಗಳು ಲಭಿಸುವವು.

**ಕರ್ಕಾಟಕ:—**

ನಿಮಗೆ ಈ ವಾರದಲ್ಲಿ ಕಳೆದ ವಾರಕ್ಕಿಂತ ಯಾವ ಭಾಗದಲ್ಲೂ ಹೆಚ್ಚಿನ ಅಭ್ಯಂತರಗಳು ಆಗುವಂತಿಲ್ಲವು. ಆಯವ್ಯಯವು ಸಮಾನವಾಗಿರುವುದರಿಂದ ಧನದ ಭಾಗದಲ್ಲಿ ಏನೂ ಚಿಂತಿಸಬೇಕಾದ್ದಿಲ್ಲ. ಆರೋಗ್ಯ ವಿಷಯದಲ್ಲಿ ಎಷ್ಟು ಎಚ್ಚರಿಕೆ ತಕ್ಕೊಂಡರೂ ಅಷ್ಟು ಒಳ್ಳೆಯದು. ಯಾಕೆಂದರೆ ರೋಗದ ಪರಿಣಾಮವು ಒಮ್ಮೆಯೇ ವಿಪರೀತಕ್ಕೆ ಮುಟ್ಟುವಂತಿದೆ. ಮತಾಚಾರಗಳಲ್ಲಿ ಮತ್ತು ಧರ್ಮದಲ್ಲಿ ನಿಮ್ಮ ಬುದ್ಧಿಯು ಕುಂಠಿತವಾಗಿರುವುದು. ಶತ್ರುಗಳು ನಿಮ್ಮನ್ನು ಯಾವ ವಿಧದಿಂದಲೂ ಪೀಡಿಸಲು ಸಮರ್ಥರಿಲ್ಲವಾದ ಕಾರಣ ಶತ್ರುಗಳಿಗೆ ಬೆದರಬೇಕಾಗಿಲ್ಲವು. ಬಂಧು ಮಿತ್ರರ ವರ್ಗವೇ ನಿಮ್ಮ ಭಾಗಕ್ಕೆ ಒಂದು ಮುಖ್ಯ ದಳದಂತಿರು

ವುದು. ತಾ. 26 ರಿಂದ 29ರ ವರೆಗಿನ ದಿನಗಳಲ್ಲಿ ಕಾರ್ಯಕ್ಕೆ ವಿಘ್ನವೂ ಮಾರ್ಗಾತಿಕ್ರಮಣದಿಂದ ಆಯಾಸವೂ ಉಂಟಾಗುವದು.

**ಸಿಂಹ:—**

ಮನುಜರ ಉನ್ನತಿಗಾಗಲಿ ಅವನತಿಗಾಗಲಿ ಅವರವರ ನಡೆನುಡಿಗಳೇ ಕಾರಣಗಳಾಗುವವು. ಆದ ಕಾರಣ ನಿಮ್ಮ ವರ್ತನೆಯಿಂದಲೇ ಈ ವಾರದಲ್ಲಿ ಅನುಕೂಲಕ್ಕಿಂತಲೂ ಪ್ರತಿಕೂಲವಾದ ವಿದ್ಯಮಾನಗಳೇ ಹೆಚ್ಚಿವೆ. ನೀವು ಉದ್ಯೋಗದಲ್ಲಿ ಎಷ್ಟೊಂದು ಜಾಗರೂಕತೆಯಿಂದ ಕಾರ್ಯವನ್ನು ನಿರ್ವಹಿಸಲು ಯತ್ನಿಸಿದರೂ ಅಕಸ್ಮಾತ್ ವಿಘ್ನವುಂಟಾಗಿ ಅಲ್ಲಿಗೆ ಕೊನೆಗೊಳಿಸುವ ಪ್ರಸಂಗವು ಬರುವುದು. ದೇಹದ ಯಾವತ್ತೂ ಭಾಗಗಳು ನೋವಿನಿಂದ ಬಿಡಿಸಲ್ಪಟ್ಟು ಬಹಳ ಕ್ಲೇಶವನ್ನುಂಟು ಮಾಡುವವು. ಹಣದ ವಿಷಯದಲ್ಲಿ ನೀವು ಚಿಂತಿಸಬೇಕಾಗಿಲ್ಲವು. ಖರ್ಚಿಗೆ ಬೇಕಾದ ಉತ್ಪತ್ತಿ ಆಗಿಯೇ ತೀರುವದು. ತಾ. 26, 27 ಈ ದಿನಗಳು ಇದ್ದುದರಲ್ಲಿ ಉತ್ತಮವಿರುವವು. ಧನಾಗಮಕ್ಕೆ ಬೇಕಾದ ಅನುಕೂಲ್ಯ, ವಸ್ತ್ರಲಾಭ, ಸ್ತ್ರೀಸುಖ ಇತ್ಯಾದಿಗಳು ಆಗುವವು.

**ಕನ್ಯಾ:—**

ಕಷ್ಟಬಂದಾಗ ಎರೆಹುಳವೂ ಕೂಡಾ ಸರ್ಪವಾಗಿ ಪರಿಣಮಿಸುವದು ಮಾನವ ಸ್ವಭಾವ ಸಹಜವಾದುದು. ಇದೇ ರೀತಿ ನಿಮಗೂ ಕೂಡಾ ಈ ವಾರದಲ್ಲಿ ಶುಭಸ್ಥಾನಗತನಾದ ಶುಕ್ರನೂ ಕೂಡ ವೇಧಪ್ರಯುಕ್ತ ಅಶುಭಕಾರಿಯಾಗಿರುವನು. ಆದ ಕಾರಣ ಯಾವ ಭಾಗದಲ್ಲೂ ಕೂಡ ನಿಮಗೆ ಸುಖ ಶಾಂತಿ ಯಿಲ್ಲವು. ನಿಷ್ಠುರವಾದ ಮಾತಿನಿಂದಾಗಿ ನಿಮಗೆಲ್ಲರೊಡನೆಯೂ ಕಲಹವಾಗುವುದರಿಂದ ಮಿತ್ರರೂ ಕೂಡ ಶತ್ರುಗಳಾಗಿ ಪರಿಣಮಿಸುವ ಕಾಲವಿದು. ಹೆಚ್ಚಿನ ಮನೋವ್ಯಥೆಯಿಂದ ನಿದ್ರಾಹಾರಗಳು ಸರಿಯಾಗಿರದೆ ಆರೋಗ್ಯವು ಸಂಪೂರ್ಣ ಕೆಡುವದು. ಉದ್ಯೋಗ ವ್ಯಾಪಾರಗಳಲ್ಲಿ ಹೆಚ್ಚಾಗಿ ಕಷ್ಟ ನಷ್ಟಗಳು ಸಂಭವಿಸುವವು. ಹಿತ ಶತ್ರುಗಳು ಹೆಚ್ಚಿ ಅನೇಕ ರೀತಿಯಲ್ಲಿ ಪೀಡಿಸುವರು. ಸ್ತ್ರೀಪೀಡೆಯೊಡಲೂ ಪ್ರವಾಸದಲ್ಲಿ ಬಹಳ ಅನಿಷ್ಟ ಶುಭಗಳೇ ಒದಗುವವು. ಆದ ಕಾರಣ ಗ್ರಹರ ಪ್ರೀತಿರೂಪವಾದ ಕಾರ್ಯಕರಣದಿಂದ ಕೆಲವಂಶ ಅರಿಷ್ಟಗಳು ದೂರವಾಗುವವು. ತಾ 25. 28, 29 ಈ ದಿನಗಳು ಸ್ವಲ್ಪ ಮಟ್ಟಿಗೆ ಶುಭಕಾರಿಗಳಾಗಿರುವುದರಿಂದ ಕೆಲವು ಭಾಗದಲ್ಲಿ ತೃಪ್ತಿಯಾಗುವುದು.

**ತುಲಾ:—**

ನಿಮಗೆ ಈ ವಾರದಲ್ಲಿ ಹೆಚ್ಚಿನ ಭಾಗದಲ್ಲಿ ಅನುಕೂಲವಿದೆ. ಆರೋಗ್ಯವು ಚೆನ್ನಾಗಿರುವುದು. ಶತ್ರುಗಳು ಪೀಡಿಸಲು ಶಕ್ತರಾಗುವುದಿಲ್ಲ. ಸ್ತ್ರೀಸುಖವನ್ನು ಚೆನ್ನಾಗಿ ಪಡೆಯುವಿರಿ. ವ್ಯಾಪಾರ, ಉದ್ಯೋಗ, ದ್ಯೂತ ಇತ್ಯಾದಿ ನಾನಾ ಭಾಗದಲ್ಲಿ ಧನಲಾಭವಾಗುವುದು. ಸಂಸಾರಕ್ಕೆ ಯಾವ ಭಾಗದಲ್ಲೂ ಕೊರತೆಯಿಲ್ಲದಿರುವುದರಿಂದ ತತ್ಸಂಬಂಧವಾದ ತಾಪತ್ರಯಗಳೇನೂ ಇಲ್ಲವು. ಆದರೆ ನಿಮ್ಮ ಪುತ್ರ ನಿಮಿತ್ತದಿಂದ ನಿಮಗೆ ಚಿಂತೆಯುಂಟಾಗುವುದು. ಪ್ರವಾಸವೂ ಕೂಡ ಸಂಭವಿಸುವುದು. ಬಂಧು ಬಳಗದವರೂ ಮಿತ್ರರೂ ಕೂಡ ನಿಮ್ಮ ಹಿತವನ್ನೆ ಬಯಸುವರು. ತಾ. 26, 27 ಮತ್ತು 30. 1 ಈ ದಿನಗಳು ಉತ್ತಮವಿರುವವು. ಈ ದಿನಗಳಲ್ಲಿ ಮೃಷ್ಟಾನ್ನ ಭೋಜನ, ಕಾರ್ಯದಲ್ಲಿ ಜಯ, ಸ್ತ್ರೀ ಸುಖಾದಿಗಳು ಲಭಿಸುವವು.

**ವೃಶ್ಚಿಕ:—**

ಸಕಲ ಗ್ರಹರೂ ನಿಮ್ಮ ಮೇಲೆ ಸಂಪೂರ್ಣ ಕೃಪೆದೋರಿರುವರು. ಆ ಕಾರಣ ನೀವು ಈ ವಾರದಲ್ಲಿ ಸುಖ ಸಾಮ್ರಾಜ್ಯದಲ್ಲಿ ಮೆರೆಯುವಿರಿ. ಎಂತಹ ಕಠಿಣಸಾಧ್ಯವಾದ ಕೆಲಸವಾದರೂ ನಿಮಗದು ತೃಣಪ್ರಾಯವಾಗುವುದು. ಸಕಲ ಕಾರ್ಯಗಳಲ್ಲೂ ಜಯವು ನಿಮಗೆ ಕಟ್ಟಿಟ್ಟ ಗಂಟೆನ್ನಬಹುದು. ಸಾರ್ವಜನಿಕ ಕಾರ್ಯಗಳಲ್ಲಿ ಒಳ್ಳೇ ಕೀರ್ತಿಶಾಲಿಗಳಾಗುವಿರಿ. ಸಮಾಜದಲ್ಲಿ ಗೌರವ ಸ್ಥಾನವನ್ನು ಪಡೆಯುವಿರಿ. ನಿಮಗೀ ವಾರದಲ್ಲಿ ಧನದ ಚಿಂತೆಯೇ ಇಲ್ಲ. ನಾಲ್ಕು ಕಡೆಗಳಿಂದ ಹಣವು ಬಂದು ನಿಮ್ಮನ್ನು ಸೇರುತ್ತದೆ. ಪ್ರಕೃತಿಯು ಸುಧಾರಿಸಿರುವುದು. ಅನೇಕ ಹೊಸ ಮಿತ್ರರ ಪರಿಚಯವಾಗುವುದು. ಸ್ತ್ರೀಯರ ಸ್ನೇಹವೂ ಆಗುವುದು. ತಾ. 26, 27 ಮತ್ತು 30 ಈ ದಿನಗಳಲ್ಲಿ ಮಾನಹಾನಿ ಮತ್ತು ಕಾರ್ಯಹಾನಿಯಾಗತಕ್ಕ ಪ್ರಸಂಗವು ಒದಗೀತು. ವಿಶ್ವಾಸಕ್ಕೆ ಭಂಗವೂ ಕೂಡ ಬಂದೀತು. ಎಚ್ಚರಿಕೆ.

**ಧನು:—**

ರಾತ್ರಿಹಗಲಿನಂತೆ ಈ ವಾರದಲ್ಲಿ ನಿಮಗೆ ಸುಖದುಃಖಗಳು ಮಿಶ್ರವಾಗಿ ಬರುವವು. ಶತ್ರುಗಳಿಂದಾಗಿ ಒಂದು ಪೀಡೆಯಾಗಲಿ ಅನಿಷ್ಟವಾಗಲಿ ಬಂದರೆ ಯಾರಿಗೂ ಅದೊಂದು ಪ್ರಾಮುಖ್ಯವಾಗಿ ತೋರದು. ಕಾರಣ ಶತ್ರುಗಳು ಸ್ವಾಭಾವಿಕವಾಗಿ ಅನಿಷ್ಟಕಾರಿಗಳು. ಆದರೆ ನಮ್ಮವರೆಂದಿದ್ದು ಅದರಲ್ಲೂ ಸಮೀಪದ ಬಂಧುಜನರಾಗಿದ್ದು ಅವರಿಂದ ಏನಾದರೂ ಅನಿಷ್ಟವುಂಟಾದರೆ ಅದು ಅರಿಂದಲೂ ಸಹಿಸಲಳವಲ್ಲ. ಇದೇ ರೀತಿ ನಿಮಗೀ ವಾರದಲ್ಲಿ ಆಗಲಿಕ್ಕಿದೆ. ಇದರಿಂದಾಗಿ ನಿಮ್ಮ ಮನಸ್ಸಿಗೆ ಬಹಳ ಖೇದವುಂಟಾಗುವುದು. ಅನಾರೋಗ್ಯದಿಂದಾಗಿ ದೈವಿಕ ಸುಖವಿಲ್ಲವು. ಆದರೂ ಶುಭಗ್ರಹರ ಅಧಿಕಾರದಿಂದ ಕೋರ್ಟು ವಿವಾದಗಳು ಜಯವಾಗುವವು. ಆರಂಭಿಸಿದ ಕಾರ್ಯಗಳು ಇಷ್ಟದಂತೆ ಕೊನೆಹೋದುವವು. ಮಿತ್ರರ ಸಹಾಯದಿಂದ ಬಹಳ ಅನುಕೂಲವಿದೆ. ತಾ 28, 29ರ ಮುಟ್ಟಿನ ದಿನಗಳಲ್ಲಿ ಅಕಸ್ಮಾತ್ ಧನವ್ಯಯವಾಗಬಹುದು.

**ಮಕರ:—**

ಈ ವಾರವು ಕೆಲವೇ ಅಂದರೆ ಒಂದೆರಡು ಭಾಗದ ಮಟ್ಟಿಗೆ ಅನುಕೂಲವಿ ಹೊರತು ಬೇರೆ ಎಲ್ಲಾ ಭಾಗಗಳಲ್ಲೂ ಪ್ರತಿಕೂಲವೇ. ಪ್ರಬಲರಾದ ಶತ್ರುಗಳ ಪೀಡೆಯನ್ನೂ ಕೂಡ ಇದಿರಿಸಿ ಅವರನ್ನು ಹಿಡಿತದಲ್ಲಿಡಲಿಕ್ಕೂ ಸ್ವಕಾರ್ಯವನ್ನು

ಸಾಧಿಸಲಿಕ್ಕೂ ನೀವು ಸಮರ್ಥರಿರುವಿರಿ. ದಾಸ ಜನರ ಅನುಕೂಲವು ಮತ್ತು ಪಶುಗಳ ಸಮೃದ್ಧಿಯೂ ಚೆನ್ನಾಗಿರುವುದು. ಇನ್ನು ಇತರ ವಿಷಯದಲ್ಲಿ ವ್ಯವಹಾರ ಭಾಗದಲ್ಲಿ ಎಲ್ಲರೊಡನೆಯೂ ಜಗಳವೇ ಆಗುವುದು. ಎಷ್ಟೊಂದು ನಾಲಿಗೆಯನ್ನು ಬಿಗಿ ಹಿಡಿದರೂ ಅದು ನಿಮ್ಮ ಸ್ವಾಧೀನವಿಲ್ಲದೆ ಸರ್ವತ್ರ ಕಲಹ ಪ್ರಿಯರೆಂಬ ಕೀರ್ತಿಗಳಿಸುವಿರಿ. ಇದರಿಂದಾಗಿಯೇ ಅವಮಾನವೂ ಆಗುವದು. ಅಕಸ್ಮಾತ್ತಾಗಿ ದೇಹದಲ್ಲಿ ಹುಣ್ಣು, ಗಾಯ ವಗೈರೆಗಳಾಗುವವು. ಹೆಚ್ಚಾದ ವ್ಯಸನದಿಂದ ಮುಖಮಂಡಲವು ತೇಜೋಹೀನವಾಗುವುದು. ವಾರದ ಆದ್ಯಂತದ ದಿನಗಳು ಹಿತಕರವಲ್ಲವು. ಅನಾರೋಗ್ಯ, ರಾಜಭಯ.

**ಕುಂಭ:—**

ಶುಕ್ರೇತರ ಗ್ರಹರೆಲ್ಲರೂ ಅನಿಷ್ಟಸ್ಥಾನವನ್ನಾಶ್ರಯಿಸಿರುವುದರಿಂದ ಹೆಚ್ಚಿನಂಶ ಕೆಡುಕೇ ಆಗುವದು. ಶುಕ್ರನು ನಿಮ್ಮನ್ನು ಧರ್ಮ ಕಾರ್ಯದಲ್ಲಿ ಪ್ರವರ್ತಿಸುವ ಕಾರಣ ವನಿತಾ ಸುಖ, ವಸ್ತ್ರ ಇತ್ಯಾದಿಗಳ ಲಾಭವಾಗುವುದು. ಇತರ ಗ್ರಹರಿಂದಾಗಿ ನೇತ್ರೋದರ ರೋಗಗಳುಂಟಾಗಿ ಅದರಿಂದ ದೇಹಪೀಡೆಯೂ, ಹೆಂಡತಿಯು ನಿತ್ಯ ಕಲಹಮಾಡುವವಳೂ ಆಗುವಳು. ಬುದ್ಧಿಯ ಹ್ರಾಸದಿಂದಲೂ ಧನವ್ಯಯದಿಂದಲೂ ಚಂಚಲ ಚಿತ್ತರಾಗಿ ದೂತನಾಡಿದವರೊಡನೆ ಜಗಳಾಡುತ್ತ ಸರ್ವತ್ರ ಛೀ ಛೀ ಎಂದೆನ್ನಿಸಿಕೊಳ್ಳುವಿರಿ. ನಿಮ್ಮ ಗೌರವವು ತಾನಾಗಿಯೇ ಮಾಯವಾಗುವುದು. ತಾ 25, 26, 27, ಈ ದಿವಸಗಳು ಬಹಳ ಅನಿಷ್ಟದಾಯಕಗಳಾಗಿರುವುದರಿಂದ ಎಚ್ಚರಿಕೆಯಿಂದಿರತಕ್ಕದ್ದು.

**ಮೀನ:—**

ನಿಮ್ಮ ಶತ್ರುಗಳಿಗೂ ನಿಮಗೂ ಇರತಕ್ಕ ಪ್ರಾಚೀನ ಕಲಹವು ನಿವೃತ್ತಿ ಹೊಂದುವುದು. ಆದರೆ ಇನ್ನೊಂದೆಡೆ ವಿಜಾತೀಯ ಜನರಲ್ಲಿ ನಿಷ್ಕಾರಣವಾಗಿ ಜಗಳವಾಗುವದು. ಸಂಸಾರವು ಸುಖಮಯವಾಗಿರುವುದು. ಮತ್ತು ಸಂಪನ್ನ ಸ್ತ್ರೀಯಳ ಸ್ನೇಹವೂ ಆಗುವುದು. ಪ್ರವಾಸವು ಸಂಭವಿಸಿ ಆ ಸಲುವಾಗಿ ಹಣವ್ಯಯವಾಗುವದು, ಮತ್ತು ಉದರ ರೋಗದಿಂದ ಶರೀರ ಪೀಡೆಯೂ ಅನಿಷ್ಟಗಳಿಂದ ಮಾನಸಿಕ ಪೀಡೆಯೂ ಉಂಟಾಗಿ ಬಾಹ್ಯಾಂತರಿಕ ಸುಖಗಳೆರಡೂ ಇಲ್ಲವೆಂದಾಗುವುದು ಬಂಧುಮಿತ್ರರ ಮತ್ತು ಮಕ್ಕಳ ವಿಯೋಗದಿಂದಾಗಿ ಸುಖಹೀನರಾಗಿ ದೈನ್ಯ ಭಾವವನ್ನು ಹೊಂದುವಿರಿ. ವೈವಣ್ಯ ಕಲಹದಿಂದಾಗಿ ಧನವ್ಯಯವೂ ಆಗುವುದು ವಾರದ ಆದ್ಯಂತ ದಿನಗಳು ಸ್ವಲ್ಪ ಮಟ್ಟಿಗೆ ಉತ್ತಮವಿರುವವು. ಇಷ್ಟಸಿದ್ಧಿ, ಸ್ತ್ರೀ ಸಹಿತ ದ್ರವ್ಯಲಾಭ.

—ಬಾಲಭಾಸ್ಕರ



Printed and published by P Venkataramanacharya for and on behalf of SUPPLY AGENCY LTD, at Manipal Power Press, Udipi.